ಸಮನ್ವಯ ಪ್ರಕಾಶನ, ಗದಗ (೨)

# ನಿರಾಭರಣ ಸುಂದರಿ

[ಎರಡನೆಯ ಮುದ್ರಣ]

ಲೇಖಕರು

**ದ. ರಾ. ಬೇಂದ್ರೆ, ಎಂ ಎ**



ಪ್ರಕಾಶಕರು

**ಸಮನ್ವಯ ಪ್ರಕಾಶನ, ಗದಗ.**

ಶ್ರೀ ಅರವಿಂದ ಜಯಂತಿ :: ಬೆಲೆ .

**೧೯೫೬** **೧—೮—೦**

# ಆರಂಭಕ್ಕೆ ಆದಿ



ಬಹಳ ದಿನಗಳ ಹಿಂದೆ ತನ್ನ ಸಹಜ ಗಾಡಿ ಮೋಡಿಗಳಿಂದ ಕನ್ನಡ ರಸಿಕರ ಮನಸೆಳೆದ ಈ ನಿರಾಭರಣ ಸುಂದರಿ ನಾಲ್ಕಾರು ವರುಷದಿಂದ ಎಲ್ಲಿ ಅಲೆದರೂ ಅಲಭ್ಯಳಿದ್ದಳು. ಇವಳ ಅಭಿಸಾರಕೆಂದೆಣಿಸಿ ಆರ್ತರಾದವರ ಅನುರಾಗ ಪೂರಕಕ್ಕಾಗಿ ಇದೀಗ ಅವಳನ್ನು ಹೊಸ ಬೆಡಗಿನೊಂದಿಗೆ ಕರೆತಂದಿದ್ದೇವೆ. ಈ ನಿರಾಭರಣ ಸುಂದರಿ ಸಮನ್ವಯದ ಗಾಂಭೀರ್ಯ ಔದಾರ್ಯಗಳನ್ನು ಕರಗಿಸದೆ ಘನವಾಗಿಸಿದ್ದಾಳೆ ಇವಳೂ ಒಂದು ರಸಸಮನ್ವಯವೇ ಆಗಿದ್ದಾಳೆ.

ಈ ಸುಂದರಿಯನ್ನು ಕಂಡು ನಕ್ಕವರುಂಟು, ಅತ್ತವರುಂಟು, ಹಾಡಿದವರುಂಟು, ಕಾಡಿದವರುಂಟು. ಕನ್ನಡ ಸಾಹಿತ್ಯದಲ್ಲಿಯ ಸರ್ವರಸಪೂರ್ಣವಾದ ಒಂದು ಫಲವಾಗಿ ಈ ನಿರಾಭರಣ ಸುಂದರಿ ಏಕೈಕಳಾಗಿದ್ದಾಳೆ. ಬೆಲೆಯ ಸಾಲಿನಲ್ಲಿ ಈ ಸುಂದರಿಯೂ ಒಂದೂ ವರೆಗೆ ನಿಂತಿದ್ದರೂ ಕಲೆಯ ನೆಲೆಯಲ್ಲಿ ಬಣ್ಣದ ಬೆಲೆವೆಣ್ಣಾಗದೆ ರಸಿಕರ ಆರಾಧ್ಯಳಾಗಿದ್ದಾಳೆ. ರಸಿಕ ಮನೋರಮೆಯಾದ ಈ ನಿರಾಭರಣ ಸುಂದರಿ ರಸರಮಣ ಲಂಪಟಳೂ ಅಹುದು. ಅಂದು ಸಾವಿರ ರೂಪದಿಂದ ಕುಣಿದ ಇವಳು ಶ್ರೀ ಬೇಂದ್ರೆಯವರ ಮನೆಯಲ್ಲಿ ಏಕಾಂಗಿಯಾಗಿ ವಿರಮಿಸಿದ್ದಳು. ಅವರ ಆಶಯದ ನೇರೆಗೆ ಮತ್ತೆ ಸಾವಿರದ ರೂಪತಾಳಿ ಬಾಳಬಂದಿದ್ದಾಳೆ. ಈ ಕೃಪೆಗಾಗಿ ಶ್ರೀ ಬೇಂದ್ರೆಯವರಿಗೆ ಕೃತಜ್ಞತೆಗಳು.

೧೫ ಆಗಸ್ಟ ೧೯೫೬

**ಗುರುರಾಜ ಹಬ್ಬು**
ಸಮನ್ವಯ ಪ್ರಕಾಶಕರು

# ವಿಷಯಾನುಕ್ರಮಣಿಕೆ

**ಆರಂಭಕ್ಕೆ ಆದಿ.**

ಮುನ್ನುಡಿ .... ೩—೨೩
ನನ್ನ ನುಡಿ ... ... ೨೪—೨೫

**೧) ಕತೆಗಳು**

(೧) ನಿರಾಭರಣ ಸುಂದರಿ .. .... ೨೯—೪೧
(೨) ಮಗುವಿನ ಕರೆ .. .... ೪೨—೪೮
(೩) ಏಕಾಕಿನಿ .... .... ೪೯—೫೯
(೪) ನಾಸ್ತಿಕ . .... ೬೦—೬೬
(೫) ಮುಂಗಾಟ . ... ೬೭—೭೬
(೬) ಫಾಲಾಕ್ಷ .... ೭೭—೯೯
(೭) ಹಿರಿದ ಕತ್ತಿ ... ೧೦೦—೧೧೫

**ಹರಟೆಗಳ ಮುಂಚೆ ಒಂದು ಹರಟೆ** ೧೧೭—೧೨೩

**೨) ಹರಟೆಗಳು.**

(೧) ನನ್ನ ಅವತಾರ ... .... ೧೨೭-೧೩೩
(೨) ಸಾವಿನಕೂಡ ಸರಸ . .. .... ೧೪೪—೧೪೪
(೩) ಮಾನಪತ್ರ ಸಮಾರಂಭ .... . ೧೪೫—೧೫೧
(೪) ಕಸಬರಿಗೆ .. ... ೧೫೨-೧೫೫
(೫) ಉಗುಳುವದು ... .... ೧೫೬—೧೬೧
(೬) ಸಾರ್ವಭೌಮ ನಿರಂತರ ವರ್ಷಭವಿಷ್ಯ ೧೬೨—೧೬೭
(೭) ಹಸ್ತಸಾಮುದ್ರಿಕದ ಪ್ರಥಮ ಪಾಠಗಳು ೧೬೮—೧೭೧
(೮) ವಿಮರ್ಶೆಯನ್ನು ಹೇಗೆ ಮಾಡಬೇಕು ? ೧೭೨-೧೭೬

**೩) ನಗೆಹಾಡು**

(೧) ಕರಪೊರಕೆ .. .... ೧೭೮
(೨) ಮುದುಕಿ . .... ೧೭೯
(೩) ಶೂನ್ಯ .... .... ೧೮೦
(೪) ಬೆಕ್ಕು ಹಾರುತಿದೆ ನೋಡಿದಿರಾ ? ೧೮೨—೧೮೫
(೫) ಒರದಾ ತಗಣಿ ಒರದಾ .... ೧೮೬—೧೯೩
(೬) ಒಂದು ಓಡು ೧೯೪

# ಮುನ್ನುಡಿ

ತಮ್ಮ "**ನಿರಾಭರಣಸುಂದರಿ**"ಗೆ ಮುನ್ನುಡಿಯ ಆಭರಣವನ್ನು ನಾನೇ ಇಡಿಸಬೇಕೆಂದು ನನ್ನ ಮಿತ್ರರಾದ ಬೇಂದ್ರೆಯವರು ಕೇಳಿದರು. ಆಭರಣಕ್ಕೇ ಆಲಂಕಾರಪ್ರಾಯಳಾದ ಇಂಥ ಸ್ವರೂಪ ಸುಂದರಿಗೆ ಎಂಥ ಆಭರಣವೂ ನಡೆಯಬಹುದೆಂಬ ಭರವಸೆಯಿಂದಲೇ ನಾನು ಒಪ್ಪಿಕೊಂಡೆ. ಏನೂ ಬರೆಯದ ನಾನು ಮುನ್ನುಡಿಗೆ ಕೈಹಾಕುವದನ್ನು ನೋಡಿ ಯಾರಾದರೂ "ಬೆಕ್ಕು ಹಾರುತಿದೆ ನೋಡಿದಿರಾ!" ಎಂದು ಹೇಳಿದರೆ ನಾನು ಹೇಳುವದು ಇಷ್ಟೆ, "ಹಕ್ಕಿ ಹಾರಿತು ಎಂದು ಬೆಕ್ಕು ಹಾರಿತು;" ನೋಡಿದರೂ ಅಷ್ಟೇ; ಬಿಟ್ಟರೂ ಅಷ್ಟೆ; ಆದರೆ, ಇಂಥ ದೃಶ್ಯದಿಂದ ಕೂಡ ಆನಂದವನ್ನೂ ಸ್ಫೂರ್ತಿಯನ್ನೂ ಪಡೆಯುವ ವಿಶಾಲ ದೃಷ್ಟಿ ಬೇಂದ್ರೆಯವರದು. "ಕಸಬರಿಗೆ"ಯಲ್ಲಿ ಸಹ ಸುಪ್ತಬುದ್ಧನನ್ನು ಜಾಗೃತಗೊಳಿಸುವ ಬೇಂದ್ರೆಯವರು ಅಪ್ರಬುದ್ಧ ತರುಣರ ಸುಪ್ತಶಕ್ತಿಗಳನ್ನು ಬಡಿದೆಬ್ಬಿಸಲು ಎಡೆಬಿಡದೆ ಪ್ರಯತ್ನಿಸುವದನ್ನು ಎಲ್ಲರೂ ಬಲ್ಲರು. ಇಂಥ ಎಷ್ಟೋ ಪ್ರಯತ್ನಗಳಲ್ಲಿ ನನ್ನಿಂದ ಬರೆಯಿಸಿದ ಈ ಮುನ್ನುಡಿಯೂ ಒಂದು. ಎಲ್ಲ ಪ್ರಯತ್ನಗಳು ಸಿದ್ಧಿಯನ್ನು ಸಾಧಿಸದಿದ್ದರೂ ಪ್ರಯತ್ನವಿಲ್ಲದೆ ಸಿದ್ಧಿಯಿಲ್ಲವೆಂಬುದು ನಿರ್ವಿವಾದ ಮಾತು. ಅಂತೂ ನಗದವರನ್ನು ನಗಿಸುವ ಬರೆಯದವರಿಂದ ಬರೆಯಿಸುವ ಶಕ್ತಿ ಬೇಂದ್ರೆಯವರಲ್ಲಿದೆ. ಈ ಶಕ್ತಿ ಅವರ ಕಾವ್ಯಶಕ್ತಿಗಿಂತ ದೊಡ್ಡದು. ಯಾಕಂದರೆ ಕವಿತೆಗಳ ಉತ್ಪಾದಕರು ನೂರಾರು ಮಂದಿ; ಆದರೆ ಕವಿಗಳ ಉತ್ಪಾದಕರು ಸಾವಿರದಲ್ಲಿ ಒಬ್ಬರೂ ಕೂಡ ಸಿಗದೆ ಇರಬಹುದು. "ಬೇಂದ್ರೆಯವರು ಕವಿಗಳೇನು ?" ಎಂದು ಕನ್ನಡವರಿಯದ ನನ್ನ ಮಿತ್ರರೊಬ್ಬರು ಕೇಳಿದಾಗ ನಾನು 'ಅವರು ಕವಿಗಳಲ್ಲ; ಕವಿಗಳ ಅಪ್ಪ' ಎಂದು ಕೊಟ್ಟ ಉತ್ತರವನ್ನು ಇಲ್ಲಿಯೂ ಹೇಳುವೆ. ಮಿತ್ರರು ಇವರನ್ನು 'ಮಾಸ್ತರ್' ಎಂದು ಕರೆದರೂ ಇವರು ಎಲ್ಲರೊಡನೆ ನಡೆದುಕೊಳ್ಳು

ವದು ಗೆಳೆಯರಂತೆ. ಕಿರಿಯರೊಡನೆ ಸಮಾನಸ್ಕಂಧರಂತೆ ಸಲಿಗೆಯಿಂದ ಮಾತನಾಡಿ, ಅವರ ಲೋಪದೋಷಗಳನ್ನು ಮನಸ್ಸಿಗೆ ಚುಚ್ಚದಂತೆ ಬಿಚ್ಚಿತೋರಿಸಿ, ಅವರಲ್ಲಿ ಅವರಿಗೂ ತಿಳಿಯದೆ ಹುದುಗಿಕೊಂಡ ಶಕ್ತಿಗಳನ್ನು ಕಂಡು ಹಿಡಿದು ಮುಕ್ತಕಂಠದಿಂದ ಹೊಗಳಿ, ಅವರ ಗುರಿಯಿಲ್ಲದ ಜೀವನಕ್ಕೆ ಆದರ್ಶವನ್ನು ಕಲ್ಪಿಸಿಕೊಟ್ಟು, ಕರ್ನಾಟಕದ ಪುನರುಜ್ಜೀವನಕ್ಕೆ ಯಥಾಶಕ್ತಿ ಸಹಾಯಮಾಡಲು ಅವರನ್ನು ಹುರಿದುಂಬಿಸುವ ಯುಕ್ತಿ ಇವರಿಗೆ ಸಾಧಿಸಿದೆ ಇಂಥ ಕಾರ್ಯಮಾಡುವ ಶ್ರೇಷ್ಠ ಸಾಹಿತಿಗಳಿಗೆ ಸಾಹಿತ್ಯಾಚಾರ್ಯರೆಂದು ಕರೆಯುವದಾದರೆ ಬೇಂದ್ರೆಯವರೂ ಸಾಹಿತ್ಯಾಚಾರ್ಯರು ಆದರೆ ಬೇಂದ್ರೆಯವರ ಮಟ್ಟಿಗೆ ಅವರಿಗೆ ಸಾಹಿತ್ಯಾಚಾರ್ಯರೆಂದರೂ ಅಷ್ಟೆ, ಸಾಹಿತ್ಯಸೇವಕರೆಂದರೂ ಅಷ್ಟೆ, ಬೇಂದ್ರೆ ಮಾಸ್ತರ್ ಎಂದರೂ ಅಷ್ಟೆ ಗರಿಯ ಮುನ್ನುಡಿಯಲ್ಲಿ ಅವರು ಹೇಳುವದು ಹೀಗೆ— "ನನ್ನ ಕವನಗಳು ಎಂದು ಇದೀಗ ಹೇಳಿದೆನಷ್ಟೇ, ಅದೊಂದು ರೂಢಿಯ ಮಾತು ಇವು ನನ್ನವಲ್ಲ, ಕನ್ನಡದ ಕವನಗಳು ಕನ್ನಡದ ಅಶರೀರ ವಾಣಿಯು ಸಾವಿರ ಬಾಯಿಗಳಿಂದ ತನ್ನ ಕಣಸನ್ನು ಕನ್ನಡಿಸುತ್ತದೆ. ಈ ಸಾವಿರ ಬಾಯಿಗಳಲ್ಲಿ ನನ್ನದೊಂದು ಇದೇ ನನ್ನ ಧನ್ಯತೆ ಕನ್ನಡದ ಪುನರ್ಜನ್ಮದ ಪ್ರಭಾತದಲ್ಲಿ ಹಾಡುವ ಕವಿಗಣದಲ್ಲಿ ನಾನೊಬ್ಬ ಅದೆ ನನ್ನ ಅಚ್ಚು ಮೆಚ್ಚು ... ... ನನ್ನ ಕವನ ಅವನ ಕವನ ಎಂಬುದು ಸಟೆ, ಕನ್ನಡವು ತನ್ನ ಕವನ ಎನ್ನುವದಿಷ್ಟೆದಿಟ. ಒಂದೆ ಕಣಸನ್ನು ಹಲವು ಕಂಣು ಕಾಣುತ್ತಿವೆ ಒಂದೆ ಕಣಸನ್ನು ಹಲವು ಬಾಯಿ ಹಾಡುತ್ತಿವೆ ...ಇದರಲ್ಲಿ ಅಪ್ಪಿತಪ್ಪಿಬಂದ "ನನ್ನದೆಂಬ ಕಿಟ್ಟವು ಸಹೃದಯರ ಸಾರಸ್ವತ ಯಜ್ಞದಲ್ಲಿ ಸುಟ್ಟು ಕನ್ನಡದ ಚಿನ್ನವಷ್ಟೇ ಉಳಿಯುವದು" ಕನ್ನಡದ ಬಗ್ಗೆ ಹೀಗೆ ಉತ್ಕಟ ಪ್ರೇಮವನ್ನು ಪ್ರಕಟಿಸಿರುವ ಬೇಂದ್ರೆಯವರ ಮಾತೃಭಾಷೆ ಕನ್ನಡವಲ್ಲ. ಆದರೆ ಮನೆಮಾತು ಕನ್ನಡವಲ್ಲದಿದ್ದರೂ ಇವರ ಮಾತೆ ಕರ್ನಾಟಕಮಾತೆ ಕನ್ನಡಮ್ಮನ ನಿಕೃಷ್ಟಸ್ಥಿತಿಯನ್ನು ಕಂಡು ಕಳವಳಗೊಂಡು ಕರುಳು ಕರುಗುವ ಹಾಗೆ ಕವನಗಳನ್ನು ಬರೆದಿದ್ದಾರೆ.

ಕವನಗಳನ್ನು ರಚಿಸಿದ ಮಾತ್ರಕ್ಕೆ ತಮ್ಮ ಕಾರ್ಯವಾಯಿತೆಂದು ಮಾತ್ರ ಇವರು ತಿಳಿದಿಲ್ಲ. ಕರ್ನಾಟಕದ ಉದ್ಧಾರಕ್ಕಾಗಿ ಟೊಂಕಕಟ್ಟಿ ಕೊಂಡ ಜನರು ಗುಂಪು ಗುಂಪಾಗಿ ಬರದೆ ಗತ್ಯಂತರವಿಲ್ಲವೆಂದು ಇವರ ನಂಬಿಗೆ ಭಿನ್ನಭಿನ್ನ ವ್ಯಕ್ತಿಗಳನ್ನು ಒಂದುಗೂಡಿಸುವ ಶಕ್ತಿ ಗೆಳೆತನ ಈ ಗೆಳೆತನವೆ ಇವರ ಆದರ್ಶ ಈ ಆದರ್ಶಕ್ಕೆ ಬರುವ ಎಡರುಗಳನ್ನು ಇವರು ಅರಿಯದೆ ಇಲ್ಲ "ಸಾಲಾ ಸ್ರೊ" ಎಂಬ ಕತೆಯಲ್ಲಿ ಮುಗ್ಧ ಬಾಲಕರ ಅವ್ಯಾಜಸ್ನೇಹಕ್ಕೂ ಕೂಡ ದ್ವೇಷದ ವಿಷಫೂತ್ಕಾರದ ಗಂಡಾಂತರ ಬರುವದೆಂದು ತೋರಿಸಿದ್ದಾರೆ ಗೆಳೆತನದ ತಳಹದಿಯ ಮೇಲೆ ಕಟ್ಟಿದ "ಗೆಳೆಯರ ಗುಂಪು" ಅದೃಶ್ಯವಾಗಿದ್ದರೂ ಗೆಳೆತನದಲ್ಲಿಯ ಇವರ ವಿಶ್ವಾಸವು ಅಚ್ಚಳಿಯದೆ ಉಳಿದಿದೆ

ಚಿಣ್ಣ ಸಕ್ಕರೆ ತಿಂದು ಚಿಳಿದ ಎಳೆಗೆಳೆತನದ  
ಕಣ್ಣನೊಳಗಿನ ಬೆಳಕು ಒಮ್ಮೆಗಿರೆ ಕಳಗುಂದಿ  
ಎಣ್ಣೆ ತೀರಿದ ದೀಪದಂತೆ ಹೋಯಿತು, ಬಿಟ್ಟು ಕತ್ತಲೊಳಗೊಬ್ಬನನ್ನೇ,  
ಹಣ್ಣನಾರಿಸಿ ಕುಳಿತ, ಕಮರಿ ಕಳಚಿದವು ದೂ,  
ಮಣ್ಣುಗೂಡಿತು ಮತ್ತೆ ಪ್ರೀತಿ ಮಾಡಿದ ಮಾರ್ಗ,  
ಸಣ್ಣಾದ ಹೃದಯದೂಳು ಇನ್ನು ಮೇಲಾದರೂ ಬೆಳಗು ಗೆಳೆತನದ ಬೆಳಕೇ!

ಆದರ್ಶದಲ್ಲಿ ಅಚಲವಾದ ವಿಶ್ವಾಸವಿಷ್ಟೆ ಅಲ್ಲ, ಎಡರುಗಳಿಗೆ ಎದೆಗೊಡುವ ಬಂಟತನ ಹಾಗೂ ಆದರ್ಶದ ಸ್ಪಷ್ಟ ಕಲ್ಪನೆ ಇವರಿಗೆ ಇದೆ ಇವರ ಗುಂಪಿನ ಕಲ್ಪನೆಯೂ 'ಸೆಂಟ್ ಬೋವ್ಹ್' ಗುಂಪಿನ ಕಲ್ಪನೆಯೂ ಒಂದೆ ಆಗಿವೆ ಸೇಂಟ್ ಬೋವ್ಹನು ಗುಂಪಿನ ಬಗ್ಗೆ ಹೇಳುವದು ಹೀಗೆ —

"I define the gruop, not as the accidental and artificial assemblage of clever men who agree on an end, but the natural and spontaneous association of young minds and young talents, not exactly similar and of the same

family, but of the same flight and the same spring, hatched under the same star, who feel themselves born, with varieties of taste and vocation, for a common work."

ಬೇಂದ್ರೆಯವರನ್ನು ಕಂಡಾಗ ನನಗೆ ಎಷ್ಟೋ ಅನ್ಯದೇಶೀಯ ಕವಿಗಳ ನೆನಪು ಬರುವದು. "ಏಟ್ಸ" ನಂತೆ ಸಾಹಿತ್ಯದ ಪುನರುಜ್ಜೀವನಕ್ಕೆ ಗುಂಪು ಕಟ್ಟಿ ಹೆಣಗಿದ್ದಾರೆ. "ಬರ್ನ್ಸ" ನಂತೆ ಜನಪದ ಸಾಹಿತ್ಯವನ್ನು ಉಪಾಸಿಸಿ ಅದರ ಮೋಹಕ ಸರಳತೆ ಮತ್ತು ಗುಂಗು ಹಿಡಿಸುವ ಧಾಟಿಗಳನ್ನು ಬಳಸಿ ಬೆಳಸಿಕೊಂಡಿದ್ದಾರೆ. "ಸ್ಕಾಟ" ನಂತೆ ಲಾವಣಿಗಳನ್ನು ಸಂಗ್ರಹಿಸುತ್ತ ಊರೂರು ಸುತ್ತಿದ್ದಾರೆ. ಆದರೆ ಇವರು ಹೆಚ್ಚಾಗಿ ಹೋಲುವದು ಆಂಗ್ಲಕವಿಯಾದ "ಕೊಲ್‌ರಿಜ್" ನನ್ನು. ಇಬ್ಬರೂ ಕವಿಗಳು, ತತ್ತ್ವಜ್ಞಾನಿಗಳು. ಇಬ್ಬರಲ್ಲೂ ಎಲ್ಲ ಜ್ಞಾನಭಾಂಡಾರವನ್ನೂ ಸೂರೆಗೊಳ್ಳುವ ಮಹತ್ವಾಕಾಂಕ್ಷೆ; "ಶ್ರೀ ಬೇಂದ್ರೆಯವರಿಗೆ ಕಾವ್ಯರಚನೆಯಲ್ಲಿ ಎಷ್ಟು ಆಸಕ್ತಿಯೋ ಅಷ್ಟೆ ಕಾವ್ಯ ವಿಮರ್ಶೆ, ತತ್ವಶೋಧನೆ ಇವುಗಳಲ್ಲಿ ಉಂಟು. ಅವರ ವ್ಯಕ್ತಿತ್ವದಲ್ಲಿಯ ಒಂದು ಸಮಾನವಾದ ಲಕ್ಷಣವೇ ಇದಕ್ಕೆ ಕಾರಣವೆಂದು ತೋರುತ್ತದೆ. ಅದೆಂದರೆ ಸರ್ವಸಂಗ್ರಾಹಕವಾದ ಹಾಗು ಮೂಲಗ್ರಾಹಿಯಾದ ಅವರ ಮನೋಧರ್ಮ. ಜೀವನದ ಎಲ್ಲ ಶಕ್ತಿಗಳನ್ನು ಆಮೂಲಾಗ್ರವಾಗಿ ಅರಿತು ಇತಿಮಿತಿಯಿಲ್ಲದೆ ಎಲ್ಲ ಬಗೆಯ ಸಿದ್ಧಿಗಾಗಿ ಹಾತೊರೆಯುವ ಒಂದು ಹಿರಿಯಾಸೆ ಈ ಮನೋಧರ್ಮದಲ್ಲಿದೆ!" ಎಂಬ ಪ್ರೊ. ಮುಗಳಿಯವರು ಹೇಳುವ ಮಾತು ಕೊಲ್‌ರಿಜ್‌ನಿಗೂ ಅನ್ವಯಿಸುವದು. "ಬೇಂದ್ರೆಯವರು ನಿಜವಾದ ಕವಿ, ಆಡುವ ಮಾತನೆಲ್ಲ ಕಾವ್ಯ ಮಾಡುವ ಮನೋಧರ್ಮ ಇವರಲ್ಲಿದೆ.... ಬೇಂದ್ರೆಯವರಿಗೆ ಅನುಭವದ ಸಮನಾದ ನಿಶಿತವಾದ ವಿಚಾರಶಕ್ತಿ ಇದೆ." ಎಂಬ ಶ್ರೀಮಾನ್ ಮಾಸ್ತಿಯವರ ಅಭಿಪ್ರಾಯವಾದರೂ ಕೊಲ್‌ರಿಜ್‌ನಿಗೆ ಅನ್ವಯಿಸುವದು. ಇಬ್ಬರ ಪ್ರತಿಭೆಯು ಎಷ್ಟು ಸಂಶ್ಲೇಷಕವೋ (synthetic) ಅಷ್ಟೇ ವಿಶ್ಲೇಷಕವೂ ಆಗಿದೆ.

ಇಬ್ಬರೂ ವರಕವಿಯಂತೆ ಎಲ್ಲವನ್ನೂ ಇಡಿಯಾಗಿ ನೋಡಬಲ್ಲರು; ವರವಿಮರ್ಶಕನಂತೆ ಬಿಡಿಬಿಡಿಯಾಗಿ ಎಲ್ಲವನ್ನೂ ಬಿಡಿಸಿ ತೋರಿಸ ಬಲ್ಲರು. ಇಬ್ಬರ ಬುದ್ಧಿಯೂ ಬೀಜದ ರಾಸಿಯಿದ್ದಂತೆ; ಯೋಗ್ಯ ಕ್ಷೇತ್ರ ದೊರಿತರೆ ಬೆಳೆದು ಹೆಮ್ಮರವಾಗಿ ಸಾವಿರಾರು ಜನರಿಗೆ ಆನಂದ ವನ್ನು ಕೊಡುವ ಬೀಜ–ವಿಚಾರಗಳು ಇಬ್ಬರಲ್ಲೂ ಅಗಣಿತವಾಗಿವೆ ಬೇಂದ್ರೆಯವರು—

"Mine is but the flower's wish
To leave some seeds behind"

ಎಂದು ತಮ್ಮ ಬಗ್ಗೆ ನುಡಿದ ಮಾತು ಯೋಗ್ಯವೇ ಆಗಿದೆ. ಇನ್ನೂ ಒಂದು ಮಾತು- ಕೋಲ್‌ರಿಜ್‌ನ ಕೃತಿಗಳೆಷ್ಟೋ ಕನಸಾಗಿಯೆ ಉಳಿ ದವು. ಬೇಂದ್ರೆಯವರು ಬರೆದ ಕೃತಿಗಳು ಕಡಿಮೆಯಾಗಿರದಿದ್ದರೂ ಅವರ ಮನಸ್ಸಿನಲ್ಲಿ ಮೂಡಿಮಸಳಿದ 'ಮಾನಸಪುತ್ರ'ರ ಸಂಖ್ಯೆ ಅಸಂಖ್ಯವಾಗಿದೆ.

( ೨ )

ನಗೆಗಾರರು, ಕವಿಗಳು ಆದ ಬೇಂದ್ರೆಯವರು ಎಷ್ಟೋ ನಗೆ ಹಾಡುಗಳನ್ನು ಬರೆದಿರುವದು ಸ್ವಾಭಾವಿಕವಾಗಿದೆ. ಅವರು ಬರೆದ ಎಲ್ಲ ನಗೆ-ಹಾಡುಗಳು ಇಲ್ಲಿದ್ದರೆ ಒಳಿತಾಗುತ್ತಿತ್ತು. ಈ ನಗೆ-ಹಾಡು ಗಳಲ್ಲಿ ಒಮ್ಮೆ ನಗೆ ಹೆಚ್ಚಾಗುತ್ತದೆ, ಒಮ್ಮೆ ಕಾವ್ಯ ಹೆಚ್ಚಾಗುತ್ತದೆ. ಒಮ್ಮೊಮ್ಮೆ ನಗೆ ಮತ್ತು ಕಾವ್ಯ ಉತ್ತಮವಾಗಿ ಬೆರೆತು ಹಾಸ್ಯ ಮಯ ಕಾವ್ಯವು ಕಾವ್ಯಮಯ ಹಾಸ್ಯವಾಗುತ್ತದೆ. ವಿಡಂಬನ ಹೆಚ್ಚಾಗಿ, ಕಾವ್ಯ ಕಡಿಮೆಯಾಗಿ, ಸರಸಸಜ್ಜನಿಕೆ ಮಾಯವಾದಾಗ ಸಹ ಈ ನಗೆ-ಹಾಡುಗಳು, ಹುಳಿಯಾದರೂ ಖಾರವಾದರೂ ಸೀರಾ ದರೂ ರುಚಿಕಟ್ಟಾದ ಒಗ್ಗರಣೆ–ಮಜ್ಜಿಗೆಯಂತೆ, ರಸದೂಟದಿಂದ ತಣಿದು ದಣಿದ ರಸಿಕರಿಗೆ ರುಚಿಕೊಡುವವು. ಸೌಂದರ್ಯೋಪಾಸ ಕರಾದ ಕವಿಗಳು ಅವರ್ಣನೀಯವಾದ ಅರ್ವಾಚೀನ ಸೌಂದರ್ಯ ವನ್ನು ಹೀಗೆ ವರ್ಣಿಸಿದ್ದಾರೆ.—

ಕುರುಡಿರಲಿ ಮೆಳ್ಳಿರಲಿ ಕಪ್ಪುಕನ್ನಡಕವಿರೆ
ನಯನಗಳೇನು ಬಣ್ಣಿಸಲಿ ಮಣ್ಣು ?
ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ ?
ಕಲಪನ್ನು ಕಾಣವೇ ನನ್ನ ಕಣ್ಣು ?
ತುಟಿಗಳನು ಬಣ್ಣಿಸಲೆ ? ತುಂಬೆಲ್ಲ ತಂಬುಲವು
ಹಲ್ಲುಗಳ ಬಣ್ಣಿಸಲೆ ? ನಿನ್ನವಹುದೊ ?
ಸಾರಣೆಯ ಕಾರಣೆಯ ಗಲ್ಲಗಳ ಬಣ್ಣಿಸಲೆ ?
ಆ ಬಣ್ಣನೆಯು ಏನು ನಿನ್ನದಹುದೋ ?
ಬಣ್ಣದಾ ಬೀಸಣಿಕೆ ಕೈಬೀಸಿ ನಡೆದಾಗ
ಕೈವಸ್ತ್ರವನ್ನು ಬಣ್ಣಿಸಲೆ ನಾನು ?
ಮೊಚ್ಚ ಮುಚ್ಚಿರಲಾಗಿ ಅಡಿಯಡಿಯ ಬಣ್ಣನೆಯು
— ರವಿಯಿರಲಿ ಕವಿಯಿರಲಿ— ಸಾಧ್ಯವೇನು ?
ಅಂಗಾಂಗ ವ್ಯಂಗವಿರಬಹುದು ಇರದಿರಬಹುದು
ವ್ಯಂಗ ಕಾವ್ಯದ ಹಾಗೆ ನಿನ್ನ ಮಾಟ
ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ,
ಬೇರೆ ಬಣ್ಣನೆ ಬರಿಯ ಬಣ್ಣದಾಟ

ಇಲ್ಲಿ ಅರ್ವಾಚೀನ ಸುಂದರಿಗೆ ಪುಷ್ಪಾರ್ಚನೆಯಾಗಿದೆ 'ಮುದುಕ' ಎಂಬ ಕವನದಲ್ಲಿ ಸಾಯದಾ ಮುದುಕಿಯ ಶ್ರಾದ್ಧವೇ ಆಗಿದೆ

ನಾಡ ಸಂರಕ್ಷಣೆಗೆ ತೋಪು ಇರದಿರಲು
ನಾಡಿಗೊಂದಿರಬೇಕು ಬಯ್ಯುವಾ ಮುದುಕಿ
ಊರ ಸಂರಕ್ಷಣೆಗೆ ನಾಯಿ ಇರದಿರಲು
ಊರಿಗೊಂದಿರಬೇಕು ಬಾಯ್ಬಡಕ ಮುದುಕಿ

ಇಲ್ಲಿಯಂಥ ಬಯ್ಯುವಾ, ಕೆಮ್ಮುವಾ, ಸಾಯದಾ ಬಾಯ್ಬಡಕ ಮುದುಕಿ ಬೇಂದ್ರೆಯುವರ ಜೀವನದಲ್ಲಿ ಬಂದು ಮನಸ್ಸಿನ ಮೇಲೆ ಆಘಾತ ಮಾಡಿ, ಸುಳಿದು ಹೋಗಿರಬೇಕು. " ಪುಲಾ ಫೂ " ಕಥೆಯಲ್ಲಿಯೂ ಇದೇ ಮುದುಕಿ ಹಣಿಕಿ ಹಾಕಿದೆ. " ಕಾರ ಹುಣ್ಣಿವೆಯ ಬೆಳದಿಂಗಳು ಹುಡುಗರು ಹಾರಾಡುತ್ತ ಚೀರಾಡುತ್ತ ಹುಡುತುತ್ತು, ತಿಳ್ಳಿ ಮುಂತಾದ ಆಟಗಳನ್ನು ಆಡುತ್ತಿರುವರು. ಆನಂದಮಯ

ಪರಮೇಶ್ವರನು ಈ ಬಾಲಲೀಲೆಯನ್ನು ಚಂದ್ರನಾಗಿ ನೋಡುತ್ತಿದ್ದಾನೆ. ಆದರೆ—

ಅಗೋ ! ಇದೇ ಒಬ್ಬ ಮುದುಕಿಯು "ಏನು ಕೀಸರ-ಬಾಸರ ಇಟ್ಟಿರುವಿರಿ ! ಊರೊಳಗೆ ನಿಮ್ಮ ಹೊರತು ಯಾರಾದರೂ ಇರುವರೋ ಇಲ್ಲವೋ ? ಸುಡಲಿ ! ಇವರ ಒದರಾಟದಿಂದ ನಿದ್ದೆ ಬರವಲ್ಲದು," ಎಂದು ಬಾಗಿಲು ಇಕ್ಕಿಕೊಳ್ಳುತ್ತಿದ್ದಾಳೆ

ಸಹಾನುಭೂತಿಯ ಲವಲೇಶದ ಸಂಪರ್ಕವಿಲ್ಲದ ಎರಡು ನಗೆ-ಹಾಡುಗಳನ್ನು ನೋಡಿದ್ದಾಯಿತು. ಇನ್ನು ಕಾವ್ಯ ಮತ್ತು ನಗೆ ಹಾಸುಹೊಕ್ಕಾಗಿ ಹೊಂದಿಕೊಂಡ ಒಂದು ನಗೆ-ಹಾಡನ್ನು ನೋಡುವ

ಕರಿಮುರಿ ನಾಯಿಕುಂಯಿಗುಡತಿತ್ತು
ಭಟ್ಟರ ಬಾಯಿ ಒಟಗುಡುತಿತ್ತು
ಸರಭರ ಮಳೆಯು ಸುರಿಯುತಲಿತ್ತು
ಕಾಲುವೆ ನೀರದು ಹರಿಯುತಲಿತ್ತು
ಭೋರನೆ ಗಾಳಿಯು ಬೀಸುತಲಿತ್ತು
ತಬ್ಬಲಿ ಕುನ್ನಿಯು ಈಸುತಲಿತ್ತು
ಬೆಚ್ಚನ ಮನೆಯಾ ಹೊಚ್ಚಲದೊಳಗೆ
ನಿಂತರು ಭಟ್ಟರು ಹಣಕುತ ಹೊರಗೆ
ಮೆಟ್ಟಲನೇರಲು ಕುನ್ನಿಯು ಅತ್ತ
ಹವಣಿಸೆ, ಬಾಗಿಲು ಮುಚ್ಚಿತು ಇತ್ತ
ಭಪ್ಪರೆ ಭಪ್ಪರೆ ಭಲರೆ ! ಭಟ್ಟರೋ
ಕಾಯ್ದರು ಮನೆಯನು ಏನು ಧಿಟ್ಟರೋ !
ಕುನ್ನಿಯು ಒಳಗೇ ಬಂದೇನೆಂದಿತು
ಭಟ್ಟರು, ಬಂದರೆ ಕೊಂದೇನೆಂದರು.

ಇಲ್ಲಿ ಮಳೆಗಾಲದಲ್ಲಿಯ ಒಂದು ಸನ್ನಿವೇಶದ ಕಾವ್ಯಮಯ

ಚಿತ್ರವಿದೆ ಮಳೆಯ ಸರಭರಾಟ; ಗಾಳಿಯ ಭೋರಾಟ; ಭಟ್ಟರ ಬಾಯಿಯ ಒಟಬಟ. ಇಷ್ಟರಲ್ಲಿಯೂ ಮುಳಗಿಯೂ ಮುಳುಗದ ಕರಿ ಮರಿನಾಯಿಯ ಕರುಳು ಕರಗಿಸುವಂತ ಕುಂಯಗುಡುವ ಶಬ್ದ, ಅಂತಹ ಶಬ್ದವನ್ನೂ ಕೇಳಿ ಕರುಣೆ ಬಾರದ ಕಲ್ಲೆದೆಯ ಭಟ್ಟರು "ಸರ್ವಂ ಖಲ್ವಿದಂ ಬ್ರಹ್ಮ" ಎಂದು ಒಟಗುಟ್ಟುವ ಬಾಯಿಯಿಂದಲೇ ಒಳಗೆ ಬಂದೆನೆನ್ನುವ ಕುನ್ನಿಗೆ, ಬಂದರೆ ಕೊಂದೇನೆನ್ನುವರು. ಬೆಚ್ಚನಾ ಮನೆಯಾಹೊಚ್ಚಲದೊಳಗೇ ನಿಂತು ಬಾಯಿಬಿಚ್ಚಿ ಬಾಗಿಲು ಮುಚ್ಚಿ, ಕರಿಮರಿನಾಯಿಯನ್ನು ಹೊರಗಟ್ಟುವದು ಸಣ್ಣ ಸಾಹಸವೇ ? ಕೋಲೇಕೆ, ಬಣ್ಣದ ಕೋಲನ್ನೂ ಕೂಡ ಉಪಯೋಗಿಸಿದ ಸಾಹಸಿಗರು ಭಟ್ಟರು !

ಭಪ್ಪರೆ ಭಪ್ಪರೆ ಭಲರೆ ! ಭಟ್ಟರೋ
ಕಾಯ್ದರು ಮನೆಯನು ಏನು ಧಿಟ್ಟರೋ !

ಅಂತೂ ಈ ಕವಿತೆಯಲ್ಲಿ ಕರಿಮರಿನಾಯಿಗಾಗಿ ಸಹಾನುಭೂತಿಯಿದೆ, ಮಳೆಗಾಲದ ರಮ್ಯ ವರ್ಣನೆಯಿದೆ, ಭಟ್ಟರ ಡಾಂಭಿಕಧರ್ಮದ ಜೊಳ್ಳುತನವನ್ನು ಮೆಲ್ಲಗೆ ಹೊರಪಡಿಸುವ ಹೂ-ನಗೆಯಿದೆ. ಇಲ್ಲಿಯ ನಗೆಯು ಹಾಲಿಗೆ ಹಾಕಿದ ರುಚಿಗೆಡಿಸುವ ಉಪ್ಪಲ್ಲ, ಸರಸವಾದ ಹಾಲಿಗೆ ಸುಂದರ ರೂಪು ಕೊಡುವ ಕೇಶರ.

ಒಮ್ಮೊಮ್ಮೆ ಚೇಷ್ಟೆಗಾಗಿ ವಿನೋದಪ್ರಿಯರಾದ ಈ ಕವಿಗಳು ಕವಿತೆ ಬರೆಯುವದುಂಟು Round Table Conference ಎಂಬ ಹೆಸರನ್ನು ಚಿತ್ರವಿಚಿತ್ರವಾಗಿ ಭಾಷಾಂತರಿಸಿ ಕರ್ನಾಟಕದ ಪತ್ರಿಕಾಕರ್ತರು ನಿರ್ಮಿಸಿದ ಪ್ರತಿಶಬ್ದಗಳನ್ನು ಪವಣಿಸಿ ಇವರು "ಶೂನ್ಯ" ಎಂಬ ಕವನವನ್ನು ನಿರ್ಮಿಸಿದ್ದಾರೆ

ದುಂಡು ಮೇಜಿನ ಸುತ್ತ
ದುಂಡು ದುಂಡು ಮಂದಿ
ದುಂಡು ದುಂಡು ಮಂದಿಗೆ
ಬಂಡೀಗಾಲಿ ಹೊಟ್ಟೆ

ಒಮ್ಮೆ “ ಅವರು ಸಾಹಿತ್ಯಾಚಾರ್ಯರು, ಇವರು ಸಾಹಿತ್ಯಾಚಾರ್ಯರು, ಅವರೇಕೆ ಸಾಹಿತ್ಯಾಚಾರ್ಯರು ? ಇವರೇಕೆ ಇಲ್ಲ ? ” ಎಂಬ ಗೊಂದಲವೇ ಗೊಂದಲವೆದ್ದಿತ್ತು ಕರ್ನಾಟಕದಲ್ಲಿ ಸಾಹಿತ್ಯಾಚಾರ್ಯ ಪದನಿಗಾಗಿ ಹಲವರು ನಡೆಯಿಸಿದ ರಭಸದ “ ಓಟ ”ದ ನೋಟವನ್ನು ನೋಡಿ ಬೇಂದ್ರೆಯವರು ಒಂದು “ ಓಡ ” ನ್ನು ಬರೆದರು.

ಉದಿತೋದಿತ ರವಿ ಕೆಂಪು—
ಸಿರಸುಗ್ಗಿಯ ಕರ ಕೆಂಪು—
ವರರತ್ನವು ಕಡುಗೆಂಪು—
—ಕೆಂಡ ಎಂದಿತು ತಾನೆ ಕೆಂಪು
“——ಆಗಲಾಗಲಿ ” ಎಂದರು

“ ನಾವು ಸಾಹಿತ್ಯಾಚಾರ್ಯರು” ಎಂದವರಿಗೆ “ ಹಾಗೆ ಆಗಲಿ ” ‘ ಅವರೇಕೆ ಅಲ್ಲ ? ’ “ ಅವರೂ ಆಗಲಿ, ” ‘ ಇವರು ’ ಹೂಂ ಇವರೂ. ವಚನೇ ಕಾ ದರಿದ್ರತಾ !

ಭೇದವದೇತಕೆ ? ಖೇದವದೇತಕೆ ?
“ ಬಸ್ಸಿ ” ನಲಿ
“ ಪೆನ್ಸಸ್ಸಿ ”ನಲಿ

( ೩ )

ಬೇಂದ್ರೆಯವರ ನಗೆ–ಹಾಡುಗಳಲ್ಲಿ ಕೆಲವು ಅಣಕವಾಡು ( Parody ) ಇವೆ. ಅಣಕವಾಡು ಆಂಗ್ಲಸಾಹಿತ್ಯದಿಂದ ಕನ್ನಡಕ್ಕೆ ಬಂದುದು. ಹಾಸ್ಯರಸವೇ ಇದರ ಜೀವಾಳ. ಜನರಂಜನೆಯೇ ಇದರ ಗುರಿ. ನಗಿಸುವದು ಇದರ ಒಂದು ಉದ್ದೇಶವಾದರೂ ಇದು ಕೇವಲ ವಿನೋದದ ಹಾಡಲ್ಲ ಸ್ವತಂತ್ರ ಅರ್ಥವಿದ್ದರೂ ಇದು ಸ್ವತಂತ್ರ ಕವನವಲ್ಲ, ಒಂದು ಕವನವನ್ನು ಅನುಕರಿಸಿ, ಅಣಕಿಸಿ, ಬರೆದುದು ಎಲ್ಲರಿಗೂ ಪರಿಚಿತವಾದ, ಎಲ್ಲರ ಬಾಯಲ್ಲಿ ನೆಲೆಗೊಂಡಿರುವ, ಕವಿತೆಗಳನ್ನೆತ್ತಿ, ಅಲ್ಲಲ್ಲಿ ಶಬ್ದಗಳನ್ನಾಗಲಿ ಅಕ್ಷರಗಳನ್ನಾಗಲಿ

ಬದಲಿಸಿ, ಅರ್ಥಕ್ಕೆ ಅನರ್ಥ ಮಾಡಿ, ರಸವಿಪರ್ಯಾಸದಿಂದ ಹಾಸ್ಯವನ್ನು ಉಂಟು ಮಾಡುವದೇ ಇದರ ರೀತಿ. ಮೂಲ ಕವಿತೆ ಅಣಕವಾಡುಗಳು ಇರುಳು–ಬೆಳಗಿನಂತೆ ಒಂದರ ಶೋಭೆಯನ್ನು ಒಂದು ಹೆಚ್ಚಿಸುವವು ಅಣಕವಾಡಿನ ತಿರುಳನ್ನು ಪೂರ್ಣ ಸವಿಯಬೇಕಾದರೆ ಅದನ್ನು ಮೂಲ ಕವಿತೆಗೆ ಹಚ್ಚಿ ನೋಡಬೇಕು. ಅಂದರೆ ಮಾತ್ರ ಮೂಲವನ್ನು ಬದಲಿಸುವದರಲ್ಲಿ ಕಂಡುಬರುವ ಜಾಣ್ಮೆಯೂ ಚಮತ್ಕೃತಿಯೂ ಒಮ್ಮೆಲೆ ಹೊಳೆದು ಅದರ ರಸಕ್ಕೆ ಪುಷ್ಟಿಯನ್ನೀಯುವವು. ಎರಡರ ರಸಗಳು ಭಿನ್ನವಾದವು. ಒಂದು ಉದಾತ್ತ ಭಾವನೆಯನ್ನೊಳಗೊಂಡು ಉನ್ನತ ವಿಚಾರಗಳನ್ನು ಮಂಡಿಸಿದರೆ ಇನ್ನೊಂದು ಸಣ್ಣಪುಟ್ಟ ವಿಷಯಗಳಬಗ್ಗೆ ವಿನೋದಕರವಾಗಿ ಬರೆದುದು ಎರಡರ ರಸಭಾವನೆಗಳಲ್ಲಿ ಭೂವ್ಯ್ಯಾಕಾಶದಷ್ಟು ಅಂತರವಿದ್ದರೂ ಶಬ್ದಾಕ್ಷರಗಳಲ್ಲಿ ಸಾಮ್ಯ ಹೆಚ್ಚು. ಈ ಹೋಲಿಕೆಯು ಹೆಚ್ಚಿದಂತೆ ಅಣಕವಾಡು ಸರಸವಾಗುವದು. ಆದರೆ ಇದು ಅಣಕವಾಡಿನ ಒಂದು ಜಾತಿ ಮಾತ್ರ. ಕೆಲವು ಅಣಕವಾಡುಗಳಲ್ಲಿ ಶಬ್ದಗಳ ಹೋಲಿಕೆ ಇಲ್ಲದಿದ್ದರೂ ಮೂಲಕವಿಯ ಮಾತಿನ ಚಟಗಳನ್ನೂ (Mannerisms) ಬರೆಯುವ ರೀತಿಯನ್ನೂ ಅನುಕರಿಸುವದರಿಂದ ಪ್ರತಿಯೊಂದು ಶಬ್ದವು ಮೂಲದ ಪ್ರತಿಧ್ವನಿಯಂತೆ ಭಾಸವಾಗುವದು ರಸವಿಪರ್ಯಾಸವು ಮಾತ್ರ ಎರಡೂ ಬಗೆಯ ಅಣಕವಾಡಿನಲ್ಲಿ ಇರಲೇಬೇಕು

ಅಣಕವಾಡು ಎಲ್ಲರ ತುತ್ತು ಅಲ್ಲ, ಸಾಮಾನ್ಯರ ತುತ್ತೂ ಅಲ್ಲ. ಕವಿತೆ ಬರೆಯುವದು ಕಠಿಣವಿದ್ದರೆ, ಅಣಕವಾಡು ಬರೆಯುವದು ಅದಕ್ಕೂ ಹತ್ತು ಪಟ್ಟು ಕಠಿಣ. ಕವಿಗೆ ಪ್ರಾಸ ವೃತ್ತಗಳ ಕಟ್ಟು–ನಿಟ್ಟುಗಳಷ್ಟೇ ಇದ್ದರೆ ಅಣಕವಾಡು ಬರೆಯುವವನಿಗೆ ಮೂಲ ಕವಿತೆಯ ಅಕ್ಷರ–ಶಬ್ದ-ಪ್ರಾಸ–ವೃತ್ತ ಮೂಲಕವಿಯ ಮಾತಿನ ಚಟ ಮುಂತಾದ ನೂರೆಂಟು ಕಟ್ಟುಗಳು ಇರುವವು. ಇಬ್ಬರಿಗೂ ಕಲ್ಪನಾಶಕ್ತಿ ಅವಶ್ಯ ಬೇಕು ಅಣಕವಾಡು ಬರೆಯುವವನಿಗೆ

ಉತ್ತಮ ಕಾವ್ಯದ ಮರ್ಮವನ್ನು ಕಂಡುಹಿಡಿಯುವ ಅಸಾಮಾನ್ಯ ಶಕ್ತಿ, ಉಚ್ಚ ಭಾವನೆಗಳನ್ನು ಹುಡುಕಿ ತೆಗೆದು, ಅವುಗಳನ್ನು ಅಕ್ಷರ ವ್ಯತ್ಯಾಸದಿಂದ ಕಿತ್ತೊಗೆದು ಏಕಕ್ಷಣದಲ್ಲಿ ವಿರುದ್ಧ ರಸಗಳನ್ನು ಹುಟ್ಟಿಸುವ ಅಸಾಮಾನ್ಯವಾದ ಕಲೆ ಬೇಕೇಬೇಕು ಯಾಕಂದರೆ ಅಣಕವಾಡು ಸೂಕ್ಷ್ಮವಾದ ವಿಮರ್ಶೆ. ಕವನ ಸೃಷ್ಟಿಯಾದರೆ ಅಣಕವಾಡು, ಒಮ್ಮೊಮ್ಮೆ ವಿಶ್ವಾಮಿತ್ರಸೃಷ್ಟಿಯೆಂತೆನಿಸಿದರೂ, ಪ್ರತಿ ಸೃಷ್ಟಿ. ಎಂ ಸಿ ವಾರ್ಡ ಇವರು ಅಣಕವಾಡಿನ ಬಗ್ಗೆ ಹೇಳುವದು ಹೀಗೆ—

" Parody may be ( as at its best it cannot fail to be ) a valuable form of creative criticism In modern usage the word " Parody " no longer implies exact imitation, but a form of humorous, yet controlled, exaggeration. In that quality of controlled exaggeration lies the value of parody as criticism · The parodist makes no direct comment Unlike the formal critic he creates. He has ceased to be an analyst, a breakerdown, a separator of part from part, that was his chrysalis stage He is now a synthesist, a builder-up, a combiner of part with part. He sets to work to make a new thing—similar to the already existing thing, but with differences The texture is similar but the peculiarities of patterning are slightly more pronounced "

ಅಣಕವಾಡು ಅಣಕಿಸುವ ಹಾಡಾದರೂ ಅವಮಾನ ಮಾಡಲಿಕ್ಕೆ ಬರೆದುದಲ್ಲ ಅದು ಅಣಕಿಸುವದು ಕವನವನ್ನೆ ಹೊರತು

ಕವಿಯನ್ನಲ್ಲ ಕವಿಯ ಮಾತಿನ ಚಟಗಳನ್ನು ಹಾಸ್ಯಕ್ರೀಡೆಮಾಡಿದರೂ ದ್ವೇಷದಿಂದ ಹಾಗೆ ಮಾಡುವದಿಲ್ಲ. ಗೋಪಾಲದಾಸರ ಕೀರ್ತನೆಯ ಮೇಲೆ ಅಣಕವಾಡು ಬರೆದರೆಂದು, ಬೇಂದ್ರೆಯವರು ದಾಸರನ್ನಾಗಲಿ ಅವರ ಹಾಡನ್ನಾಗಲಿ ದ್ವೇಷಿಸುವರೆಂದಲ್ಲ ಆ ಹಾಡು ಅವರ ಪ್ರೀತಿಯದಂತೆ ಒಬ್ಬರನ್ನು ಅನುಕರಣ ಮಾಡುವದು ಮಾನವನ ಹುಟ್ಟುಗುಣ. ಅಣಕಿಸುವದೂ ಹುಟ್ಟುಗುಣ. ಅಜ್ಜನಂತೆ ಕೋಲು ಹಿಡಿದುಕೊಂಡು ಬಗ್ಗಿ ನಡೆದು ಅಣಕಿಸುವ ಮಗು, ಚೇಷ್ಟೆಯ ಪ್ರೇಮದಿಂದ ಹಾಗೆ ಮಾಡುವದೇ ಹೊರತು ಅಜ್ಜಪ್ಪನ ಮೇಲಿನ ದ್ವೇಷದಿಂದಲ್ಲ ವೃತ್ತಪತ್ರದಲ್ಲಿ ವಿನೋದಕ್ಕಾಗಿ ಮಹಾತ್ಮರ ತಲೆಯನ್ನು ಕೊಡದಷ್ಟು ಗಡುತರವಾಗಿಯೂ ಕಾಲುಗಳನ್ನು ಕಡ್ಡಿಯಷ್ಟು ಸೀರವಾಗಿಯೂ ತೆಗೆಯುವ ವಿಕೃತ ಚಿತ್ರಕಾರನು (cartoonist) ಮಹಾತ್ಮರು ಸ್ವರಾಜ್ಯ ಬೇಡುವರೆಂಬ ದ್ವೇಷದಿಂದ, ಇಲ್ಲವೆ ಗಾಂಧಿಯವರಷ್ಟು ದೊಡ್ಡಮನುಷ್ಯ ತಾನಾಗಿಲ್ಲವಲ್ಲ ಎಂಬ ಅಸೂಯೆಯಿಂದ ಹಾಗೆ ಮಾಡುವದಿಲ್ಲ. ಹೀಗಿದ್ದ ಪಕ್ಷದಲ್ಲಿ ತಮ್ಮ "ಹಕ್ಕಿ ಹಾರುತಿದೆ" ಎಂಬ ಕವನದ ಮೇಲೆ ಅಣಕವಾಡನ್ನು ರಚಿಸುವದರಿಂದ ಬೇಂದ್ರೆಯವರು ತಮ್ಮನ್ನು ತಾವೇ ದ್ವೇಷಿಸುವರೆಂದು ಅನ್ನಬೇಕಾದೀತು. ಆದರೆ ಮಾತ್ಸರ್ಯದ ಇಲ್ಲವೇ ದ್ವೇಷದ ನಂಜು ಸ್ವಲ್ಪವೇರಿದರೂ ಕೂಡ ಮಗುವಿನ ಆಟದಂತಿದ್ದ ಅಣಕವಾಡು ಹೋಗಿ ಚೇಳಿನ ಕೊಂಡಿಯಂತಹ ವಿಡಂಬನೆಯಾಗಿ ಬಿಡುವದು.

ಇನ್ನು ಈ ಪುಸ್ತಕದಲ್ಲಿಯ ಅಣಕವಾಡುಗಳನ್ನು ನೋಡುವ. "ಒರದಾ ತಗಣಿ ಒರದಾ" ಎಂಬುದು "ವರದಾ ಕಂಚೀ ವರದಾ" ಎಂಬ ಗೋಪಾಲದಾಸರ ಕೀರ್ತನೆಯ ಅಣಕವಾಡು. ಇದು ಮೂಲ ಕವನವನ್ನು ಹೆಚ್ಚಾಗಿ ಹೋಲುವದು. ಮೂಲವನ್ನು ಬದಲಿಸುವ ಬೆಡಗು ಬೆರಗು ಗೊಳಿಸದೆ ಬಿಡದು. ಇದರಲ್ಲಿ, ಇಡಿ ದಿನ ಮೈಮುರಿದು ದುಡಿದು, ದಣಿದು, 'ಶ್ರೀ ಹರಿ' ಯೆಂದು ಒರಗಿದ, ಬಡ ಅಡಿಗೆಯವನು ತಗಣೆಯ ತಾಪವನ್ನು ತಾಳಲಾರದೆ, ಮತ್ಕುಣ

ಕುಲವನ್ನೆಲ್ಲ ಶಾಪದಿಂದ ಸಂಹಾರಮಾಡೆಂದು ದೇವರಿಗೆ ಒರೆದು ಕೊಂಡ ಸನ್ನಿವೇಶವು ಚಿತ್ರಿತವಾಗಿದೆ. "ಬೆಕ್ಕು ಹಾರುತಿದೆ ನೋಡಿದಿರಾ !" ಇದು ಇವರದೇ ಆದ "ಹಕ್ಕಿ ಹಾರುತಿದೆ" ಎಂಬ ಸುಪ್ರಸಿದ್ಧ ಕವನದ ಅಣಕವಾಡು. ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ ಯುಗಯುಗಗಳ ಹಣೆಬರಹವ ಒರಸಿ, ಹಕ್ಕಿಯ ರೂಪುಗೊಂಡು ಹಾರುವ ಕಾಲ ಪುರುಷನನ್ನು ಮೂಲ ಕವಿತೆ ವರ್ಣಿಸಿದರೆ, ಅದರ ಅಣಕವಾಡು, ಜೊಂಡಿಂಗದ ಹುಲುಗಡಣವ ಮುಕ್ಕಿ, ಹಾಲು ಮೊಸರಿನ ಭಾಂಡಭಾಂಡಗಳನ್ನು ಹೊರಳಾಡಿಸುವ ಮಾರ್ಜಾರ ರಾಜನ ಪರಾಕ್ರಮವನ್ನು ಕುರಿತು ಬರೆದುದು. ಇದು ಸರ್ವಾಂಗ ಸುಂದರವಾದ ಅಣಕವಾಡು "ತಮ್ಮ ಕವನದ ಮೇಲೆ ಹೀಗೆ ತಾವೇ ಅಣಕವಾಡು ಬರೆಯಬಹುದೇ !" ಎಂದು ವಿಮರ್ಶಕರೊಬ್ಬರು ನೊಂದುಕೊಂಡು ಕಳಕಳಿಯಿಂದ ಕೇಳಿದ್ದರು. ಈ ಪ್ರಶ್ನೆಯಲ್ಲಿ ಕಂಡುಬರುವ ಅಣಕವಾಡಿನ ವಿಪರೀತ ಕಲ್ಪನೆಯು ಮಾಯವಾಗಿ, ಬೇಂದ್ರೆಯವರೂ ಇತರರೂ ಸರಸವಾದ ಸೂಕ್ಷ್ಮವಾದ ವಿಮರ್ಶಾತ್ಮಕ ಅಣಕವಾಡುಗಳನ್ನು ಹೆಚ್ಚಾಗಿ ಬರೆದಾಗ ಅಣಕವಾಡು ಕರ್ನಾಟಕದಲ್ಲಿ ಸರ್ವಸಮ್ಮತವಾದ ಸಾಹಿತ್ಯ ಪ್ರಕಾರವಾಗುವದು. ಆ ದಿನವು ಬೇಗನೆ ಬರಲಿ

( ೪ )

ಅಣಕವಾಡಿನಂತೆ ಹರಟೆ ( Personal Essay ) ಯಾದರೂ ಆಂಗ್ಲ ಸಾಹಿತ್ಯದಿಂದ ಬಂದುದು ಆಂಗ್ಲ ಸಾಹಿತ್ಯದಲ್ಲಿ ಈ ಸಾಹಿತ್ಯ ಪ್ರಕಾರವು ಸಂಪೂರ್ಣ ವಿಕಾಸವನ್ನು ಹೊಂದಿದೆ. ಹರಟೆಯೆಂದರೆ ಗದ್ಯಭಾವಗೀತ ಎನ್ನುವಷ್ಟು ಉತ್ತಮ ಹರಟೆಗಳು ಇಂಗ್ಲೀಷಿನಲ್ಲಿವೆ. ಹರಟೆಗಾರನೆಂದರೆ ಮನಸ್ಸಿಗೆ ಬಂದದ್ದನ್ನು ಬಾಯಿಗೆ ಬಂದ ಹಾಗೆ ಬಕಾಸುವ ಬಾಷ್ಕಳವಂತನಲ್ಲ, ಏನಾದರೂ ಮಾಡಿ ಜನರನ್ನು ನಗಿಸಿಯೇ ಬಿಡುವೆನೆಂದು ಪಣತೊಟ್ಟ ವಿದೂಷಕನಲ್ಲ ಪ್ರಬಂಧವೆನ್ನುವಷ್ಟು ಹರಟೆಯ ಬಂಧವು ಬಂಧುರವಾಗಿರದಿದ್ದರೂ ಹರಟೆಯ

ನ್ನುವಷ್ಟು ಶಿಥಿಲವಾಗಿಲ್ಲ ಎಲ್ಲಿಯೋ ಹುಟ್ಟಿ ಹೇಗೆಯೋ ಹರಿದು ಎಲ್ಲಿಗೋ ಮುಟ್ಟುವ ಹರಟೆಯ ಹೊಳೆ ಹೇಳಿ ಕೇಳಿ ಹುಚ್ಚು ಹೊಳೆ ಅವರ ರೀತಿಯೇ ಬೇರೆ; Personal Essay ದ ರೀತಿಯೇ ಬೇರೆ ಅತ್ತಿತ್ತ ಸುತ್ತಾಡಿದಂತೆ ಕಂಡರೂ ಅದು ಒಂದು ಭಾವನೆಯ ಲೀಲಾ ವಿಲಾಸ-ವಿಸ್ತಾರ. ಅದು ಅತ್ತಿತ್ತ ಸುತ್ತಾಡುವದು ಪದ ವಿನ್ಯಾಸ ವಿಚಕ್ಷಣೆಯಾದ ನರ್ತಕಿಯಂತೆಯೆ ಹೊರತು, ಓಣಿ ಓಣಿ ತಿರಗುವ ಉಂಡಾಡಿಗನಂತಲ್ಲ. ವಿನೋದವು ಇದರ ಅಂಗವಾದರೂ ಇದು ಕೇವಲ ವಿನೋದ ಲೇಖನವಲ್ಲ. ಇದು ಅಡ್ಡಾ ಕತ್ರಿಗಳನ್ನು ಕೂಡಿಸಿ ಹೊಸೆದ ಉದ್ದ ಕತೆಯಲ್ಲ, ಲೇಖಕನ ಆತ್ಮಕಥೆ ಇದು ಜೇಡವು ತನ್ನ ಒಡಲ ನೂಲಿನಿಂದಲೇ ಜಾಲವನ್ನು ನೇಯುವಂತೆ ಹರಟೆಗಾರ ನಾದರೂ ತನ್ನ ಸ್ವಂತ ಜೀವನದ ಕಟು-ಮಧುರ ಆಖ್ಯಾನದಿಂದಲೆ ಹರಟೆಗಳನ್ನು ಹೊಸೆಯುತ್ತಾನೆ. ಈತನ ನಾಯಕ ಈತನೇ. ಇಂಥದೇ ವಿಷಯ ಬೇಕೆಂಬ ಹಟವಿಲ್ಲ ಇವನಿಗೆ ಕಸಬರಿಗೆಯಿಂದ ಕೈಲಾಸದವರೆಗೆ, ಮೈಸೂರಿನಿಂದ ಮಸಾಲೆಯ ವರೆಗೆ, ಹರಟೆಯಿಂದ ಪರಟೆಯ ವರೆಗೆ— ಯಾವ ವಿಷಯವಾದರೂ ಸರಿ, ಯಾಕಂದರೆ ಯಾವ ವಿಷಯವನ್ನು ತೆಗೆದುಕೊಂಡರೂ ಬರೆಯುವದು ತನ್ನ ಬಗ್ಗೆಯೇ ತನ್ನ ಏಕಾಂತಗಳನ್ನು ಜನತಾ-ಜನಾರ್ದನನ ಕಿವಿಯಲ್ಲಿ ಉಸುರಿ ಲೋಕಾಂತ ಮಾಡುವ ಬಂಟನಿವ. ತನ್ನ ಕತೆಯನ್ನು ಕಟುಮಧುರ ವ್ಯಾಖ್ಯಾನದೊಡಗೂಡಿ ವಿವರಿಸುತ್ತ, ತನ್ನ ಸ್ಮೃತಿಗಳ ಗಂಟು ಬಿಚ್ಚಿ ಬಿಚ್ಚು ಮನಸ್ಸಿನಿಂದ ಅವುಗಳನ್ನು ಮಂಡಿಸುತ್ತ, ತನ್ನ ಜೀವನಕಥೆಯ ಹಂದಿರದ ಮೇಲೆ ಸಾಮಾನ್ಯಸಂಸಾರದ ಹಂಬನ್ನು ಹಬ್ಬ ಬಿಡುತ್ತ, ತನ್ನ ಬಗ್ಗೆಯೆ ಮಾತನಾಡಿದರೂ ಅಹಂಕಾರದ ಸಂಪರ್ಕವಿಲ್ಲದ ಗೆಳೆತನದ ಸಲಿಗೆಯ ರೀತಿಯನ್ನು ಉಪಯೋಗಿಸುತ್ತ, ತನ್ನ ತಪ್ಪು ಒಪ್ಪುತ್ತ, ತನ್ನ ಹುಚ್ಚುತನಕ್ಕೆ ತಾನೂ ನಕ್ಕು ನಮ್ಮನ್ನೂ ನಗಿಸುತ್ತ ಬರೆಯುವದೇ ಹರಟೆಗಾರನ ಕಲೆ, ಇಷ್ಟೆಲ್ಲ ಮಾಡಬಲ್ಲ ಹರಟೆಗಾರ ಕೇವಲ ನರ್ಮಸಚಿವನಲ್ಲ; ಉಚ್ಚ ಸಾಹಿತಿ. ಕವಿತೆಗಳನ್ನು ಬರೆಯದ

ಕವಿ. ಅಂತೆಯೆ ಜೆ. ಬಿ. ಪ್ರಿಸ್ಲೇಯವರು ಹೀಗೆ ಹೇಳುತ್ತಾರೆ— " He is a poet, with his harp laid aside, musing over apipe; He is a philosopher on the hearth." ಹರಟೆಯ ಶ್ರೇಷ್ಠತೆಯನ್ನು ಮನಗಂಡು 'ಎಂಡ್ಮಂಡ್ ಗಾಸ್ಸ'ರು ಹೇಳುವದು ಹೀಗೆ— " An essay must be constructed with as much care as a sonnet "

ಬೇಂದ್ರೆಯವರಲ್ಲಿ ಹರಟೆಗಾರರನಿಗೆ ಬೇಕಾದ ಎಲ್ಲ ಗುಣಗಳೂ ಇವೆ. ಮೋಹಕ ವ್ಯಕ್ತಿತ್ವ, ಸಲಿಗೆಯ ಶೈಲಿ, ಹೂ-ನಗೆ, ತನ್ನ ಜೀವನದ, ತನ್ನ ಆಶೆ ಆಕಾಂಕ್ಷೆಗಳ, ತನ್ನ ಲೋಪದೋಷಗಳ ಬಗ್ಗೆ ಮನಬಿಚ್ಚಿ ಮಾತನಾಡುವ ಧೈರ್ಯ—ಎಲ್ಲವೂ ಯಥೇಷ್ಟ ಇವೆ. ಆದರೂ ಹರಟೆ ಎಂದು ನಾಮಕರಣ ಮಾಡಿದ್ದರಿಂದಲೋ ಏನೋ ಇವರ ಹರಟೆಗಳು Personal Essay ಆಗದೆ ವಿನೋದ ಲೇಖನ ಗಳಾಗಿರುವವು. ಹರಟೆ ಎಂದು ಹೆಸರಿಟ್ಟಕೂಡಲೆ ಬೇಂದ್ರೆಯವರಿಗೆ ಹಳೆಯ ಹರಟೆಯ ಸಂಪ್ರದಾಯ ನೆನಪಿಗೆ ಬರುವದು. ಅದರ ಬಗ್ಗೆ ಅವರು ಹೇಳುವದು ಹೀಗೆ—ಹಳೆಯ ಹರಟೆಯ ಮನೆತನ ದೊಡ್ಡದು. ರಾಜರ ಸುಖಸಂಕಥಾವಿನೋದದಲ್ಲಿ ಮೊಳತು, ಪಂಡಿತರ ಕಾವ್ಯ ಶಾಸ್ತ್ರವಿನೋದದಲ್ಲಿ ಚಿಗಿತು, ಕವಿಗಳ ಅಕ್ಕರಗೊಟ್ಟೆಯಲ್ಲಿ ಬೆಳೆದು, ವೇಶ್ಯಾವಾಟದ ವಿದೂಷಕರಲ್ಲಿ ಶಾಖೋಪಶಾಖೆಯಾಗಿ, ಚದುರೆ ಯರ ಮಾತಿನಲ್ಲಿ ಹೂತು, ವಿಲಾಸವಿಲಾಸವಾಗಿ ನಾಟ್ಯವಾಡಿದೆ. ಹಳೆಯದರ ಒನಪು ಒಯ್ಯಾರ ಒಡವೆ ಶೃಂಗಾರಗಳನ್ನು ನಾವು ಬಿಡ ಕೂಡದು. ವಕ್ರೋಕ್ತಿಯ ರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು, ಕಿರಿಮಾತು, ಕುಸುರಮಾತು, ಶ್ಲೇಷೋಕ್ತಿ, ವ್ಯಾಜೋಕ್ತಿ, ಮೊದಲಾದ ಉಕ್ತಿ ಪ್ರಕಾರಗಳು, ಹಾಸ್ಯದಲ್ಲಿದ್ದ ಉಪಮೆ ರೂಪಕಾದಿಗಳು, ಮಾತಿನ ಜಾಣರ ಮುಂಗಾಲು ಪುಟಿಗೆಯ್ಯ ಮಾತು, ಕುಹಕರ ಕೊಂಕು ಕೊಳಕು ಮಾತು, ಮೂದಲಿಸುವವರ ಅಣಕದ ಮಾತು, ಹರಿಕಥೆಯವರ ಅಡ್ಡಕಥೆ, ಅಡ್ಡಮಾತು, ಅಡ್ಡ

ನಗೆ ಇವೆಲ್ಲವೂ ಇಂದಿನ ಹರಟೆಗೆ ಸಂಸ್ಕಾರವನ್ನು ಕೊಡುವವು." ಹೀಗೆ ಮಾತಿನ ಸಂತೆಯಲ್ಲಿ 'ಮೋಹಕ ವ್ಯಕ್ತಿತ್ವದ ಸರಳ ಪ್ರದರ್ಶನವೇ ಹರಟೆಯ ಜೀವಜೀವಾಳ' ಎಂಬ ಮುತ್ತಿನಂತಹ ಮಾತನ್ನು ಮರೆತೇ ಮುಂದೆ ಸಾಗಿದ್ದಾರೆ ಬೇಂದ್ರೆಯವರು! ಆದರೆ ಇದಕ್ಕಾಗಿ ನಾವು ವ್ಯಸನಪಡುವ ಕಾರಣವಿಲ್ಲ. ಸಾಹಿತ್ಯ ಪ್ರಕಾರಗಳು, ಜಾದುಗಾರನ ಮಾವಿನಗಿಡದಂತೆ ಅರೆಕ್ಷಣದಲ್ಲಿ ಸಂಪೂರ್ಣವಿಕಾಸವನ್ನು ಹೊಂದುವದಿಲ್ಲ. ಆಂಗ್ಲ ಹರಟೆಗಳಲ್ಲಿ ಕಂಡುಬರುವ ಪರಿಪಕ್ವತೆ ನೂರಾರು ವರ್ಷಗಳ ಬೆಳವಣಿಗೆಯ ಸಿದ್ಧಿ. ಕನ್ನಡ ಹರಟೆ ಇನ್ನೂ ಚಿಕ್ಕ ಮಗು, ಹಿರಿಯರಂತೆ ಹೇಗೆ ನಡೆದೀತು ? ಅಂತೂ ಇಂಗ್ಲೀಷಿನ Personal Essayದ ಮಾದರಿಯ ಲೇಖನಗಳು ನಮಗೆ ಬೇಕು ಅಂತಹ ಲೇಖನ ಬರೆಯಲು ಬೇಂದ್ರೆಯವರು ತುಂಬಾ ಶಕ್ತರು ಅವರು ಅವುಗಳನ್ನು ಬೇಗ ಬರೆಯಲಿ ಎಂಬುದೇ ನನ್ನ ಅಭಿಲಾಷೆ

ಎಲ್ಲ ಕಡೆಗೂ ಎದ್ದುಕಾಣುವ ಹಾಸ್ಯ ಈ ಹರಟೆಗಳಲ್ಲಿ ಹೊಳೆಯಾಗಿ ಹರಿದಿದೆ ಮಾನಪತ್ರದ ಸರಸ ಅರ್ಥ, ಮಾನಪತ್ರವು ಭಾರತೀಯ ಆಚಾರವೆಂಬ ಸಿದ್ಧಾಂತ, ಇದಕ್ಕೆ ಗೀತೆಯಲ್ಲಿದ್ದ ಆಧಾರ, ಮಾನವ ಪ್ರಾಣಿಯ ವ್ಯಾಖ್ಯೆ, ಶೇಕ್ಸಪಿಯರ ಮಹಾಕವಿಯು ಉಗುಳನ ಬಗ್ಗೆ ಬರೆದ ಮಹಾನಾಟಕ, ಉಗುಳುವದಕ್ಕೂ ವೇದಕ್ಕೂ ಇದ್ದ ನಿಕಟ ಸಂಬಂಧ, ತಾನು ಅವತಾರಿಯೆಂದು ಸಿದ್ಧಮಾಡಲು ಕೊಟ್ಟ ಕುರುಹುಗಳ ಪಟ್ಟಿ, ಸೂಕ್ಷ್ಮವಾಗಿ ನೋಡಿದರೆ ತನ್ನ ಬಾಲಲೀಲೆಗಳಲ್ಲಿ ಕಂಡುಬರುವ ತನ್ನ ಅವತಾರದ ಮುಂಗುರುಹು, "ನಿಜವಾದುದನ್ನು ಹೇಳಲು ಎಲ್ಲರಿಗೂ ನಾಚಿಕೆ, ಎಲ್ಲರಿಗೂ ಹೇಸಿಕೆ; ಎಂಬ ಸಿದ್ಧಾಂತದ ಮಂಡನೆ, ತ್ರಿಭುವನ ಸುಂದರಶಾಸ್ತ್ರಿಗಳ "ಪ್ರ–ಚ–ಸ–ದ–ತ್ರ" ಎಂಬ ಪಂಚಾಕ್ಷರಿ ಮಂತ್ರ, ಸಾರ್ವಭೌಮ ನಿರಂತರ-ವರ್ಷಾಭವಿಷ್ಯ,—ಇವೆಲ್ಲವುಗಳೂ ಹೊಟ್ಟೆ ಹುಣ್ಣಾಗುವಂತೆ ನಗಿಸದೆ ಬಿಡವು. ಬೇಂದ್ರೆಯವರ ಅಣಕವು ಹರಟೆಗಳಲ್ಲಿ ಅಲ್ಲಲ್ಲಿ ಇಣುಕುತ್ತದೆ "ಉಗುಳುವದು" ಶಾಸ್ತ್ರೀಯ ಸನಾತನಿಗಳ ಹಾಗ್ಯೆ ಸನಾತನಿ ಶಾಸ್ತ್ರೀಯ ಪಂಡಿತರ ಲೇಖನಗಳ ಅಣಕವಾದು, ವೇದ

ದಲ್ಲಿ ಆಧಾರವಿಲ್ಲದೆ ತಾವು ನಿರಾಧಾರರೆಂದು ತಿಳಿದುಕೊಳ್ಳುವವ ಮನೋವೃತ್ತಿಯ ಚಿತ್ರ "ಸಾರ್ವಭೌಮ-ನಿರಂತರ-ವರ್ಷಾ ಭವಿಷ್ಯ,ವು ವಾರಭವಿಷ್ಯ, ಮಾಸಭವಿಷ್ಯ ಬರೆದು, ಬರೆದದ ಸುಳ್ಳಾದಾಗ ಜಾಣತನದಿಂದ ಜಾರಿಕೊಳ್ಳುವವರ ಚಿತ್ರ "ಸಾವಿ ಕೂಡ ಸರಸ" ಹಾಗು "ನನ್ನ ಅವತಾರ" ಎಂಬ ಹರಟೆಗಳ "ಚೇಸ್ಟರ್‌ಟನ್"ನ ಹರಟೆಗಳಷ್ಟು ಉತ್ತಮವಾಗಿವೆ. ಹಳೆಯ ಹರಟೆಯ ಹೊಳೆಯ ದಂಡೆಗುಂಟ ಹೊರಟ ಬೇಂದ್ರೆಯವರು ಈ ಎರಡು ಲೇಖನಗಳಲ್ಲಿ ಆಂಗ್ಲಹರಟೆಯ ತಟವನ್ನು [illegible] ಮುಟ್ಟಿ ದ್ದಾರೆ. ಒಟ್ಟಾರೆ ಬೇಂದ್ರೆಯವರ ಹರಟೆಗಳು ಓದುಗರಿಗೆ ಅಮಿ ಆನಂದವನ್ನೂ ನಗೆಯನ್ನೂ ಒದಗಿಸಿ ಕೊಡುವ ಲೇಖಗಳು. ಇಂ ಲೇಖಗಳಿಂದಲ್ಲವೆ ವಾಚನಾಭಿರುಚಿ ಬೆಳೆಯುವದು?

( ೫ )

'ಒಂದೇ ಕತೆ ಬರೆದವನು ಕತೆಗಾರನಲ್ಲ' ಎಂದು ಹೇಳುವದ ಸುಲಭ; 'ಎಷ್ಟು ಕತೆ ಬರೆದರೆ ಕತೆಗಾರನೆನ್ನಬೇಕು?' ಎಂ ಹೇಳುವದು ಮಾತ್ರ ಅಷ್ಟು ಸುಲಭವಲ್ಲ. ಬೇಂದ್ರೆಯವರು ಕ ಗಾರರಾಗಲಿ ಬಿಡಲಿ, ಈ ಸಂಗ್ರಹದಲ್ಲಿಯ ಅವರ ಏಳು ಕತೆಗಳನ್ನ ಓದಿದವರು, ಅವರು ಇಂತಹ ಕತೆಗಳನ್ನು ಇನ್ನೂ ಹೆಚ್ಚಾಗಿ ಬರೆಯ ಎಂದು ಹಂಬಲಿಸುವದು ಸಹಜ.

ಈ ಕತೆಗಳ ವಿಷಯ ವಿವಿಧವಾಗಿದೆ. ಎಳೆಯ ಗೆಳೆಯ ಚಿನ್ನಾಟ, ಈ ಚಿನ್ನಾಟಕ್ಕೂ ಆಕಸ್ಮಾತ್ ಬಡಿದುಕೊಳ್ಳು "ಪಾಲಾ ಫೂ" ಎಂಬ ಪ್ರೇತದ ಪಿಷಫ್ರಾತ್ಕಾರ, ಪಾಲಾ ಫು ಎಂದ ನಾಲ್ಕೆಂಟು ದಿವಸಗಳಲ್ಲಿ "ಫಟ್ ಎಂದೊಡನ ಬ್ರಹ್ಮಹತ್ಯೆ ಎನ್ನುವ ಹಾಗೆ ಬಂದ ಗೆಳೆಯನ ಮರಣದಿಂದ ಮನಸ್ಸಿನ ಮೇಲೆ ಆ ಆಘಾತ, ಊರವರೂ ಮನೆಯವರೂ ಕೂಡಿಯೇ ಹರಿದುತಿಂದಂತೆನಿಸಿ ಜೀವಕ್ಕೆ ಬೇಸತ್ತು, ಉರುಉರು ಉಗ್ಗಡದಲ್ಲಿ ನೀರಿ ಹೋದಾಗ ಭಾವೀ ಬೀಳಬೇಕೆನ್ನುವ ಬಡವರ ಸೊಸೆ, ಬೀಳಬೀಳ

ವಾಗ " ಮಗುವಿನ ಕರೆ " ಕೇಳಿದಂತಾಗಿ ವಿಷನಿಮಿಷವು ರಸನಿಮಿಷವಾದ ರಸಮಯ ಸನ್ನಿವೇಶ, ನಾಸ್ತಿಕ ನಾರಾಯಣರಾಯರ ವ್ಯಕ್ತಿಚಿತ್ರ, ದೇವರ ಆಸ್ತಿಕ್ಯ ನಾಸ್ತಿಕ್ಯದಷ್ಟೇ ವ್ಯರ್ಥವಾದ ರಾಯರ ನಾಸ್ತಿಕ್ಯ ಆಸ್ತಿಕ್ಯದ ಬಗ್ಗೆ ಜನರ ಹುರುಳಿಲ್ಲದ ವಾದ, ಸಣ್ಣರಾಯರ ಪ್ರತಾಪದ ಕಥೇ, ಹುಡುಗನ " ಮಂಗಾಟ "ದ ಸುತ್ತು ತಂದೆ ಕಟ್ಟಿದ ಪವಾಡದ ಕೀರ್ತನೆ; ಮೂವರು ಹೆಂಡಿರು ಪಟಪಟ ತೀರಿಕೊಂಡಿದ್ದರೂ ಮದುವೆಯ ಹುಚ್ಚುಬಿಡದ ' ಹಿರಿದ ಕತ್ತಿ ' ಯಂಥ ದೇಸಾಯರು, ಇಂಥ ಮುದುಕನನ್ನು ಒಲ್ಲೆನೆನ್ನುವ ಮಗಳನ್ನು ಹಿರಿದ ಕತ್ತಿಯಿಂದ ಬೆದರಿಸುವ ಬಂಟರಾದ ನರಸೀಂಗರಾಯರು, ಕತ್ತಿಯನ್ನು ಕಂಡು ಹೆದರಿ ಜ್ವರ ಬಂದು ಮಗಳು ಸತ್ತು ಸತ್ತು ಉಳಿದಾಗ ಹಿರಿದ ಕತ್ತಿಗೆ ಬಲಿ ಕೊಡಬಾರದೆಂದು ಬಂದ ಸದ್ಬುದ್ಧಿ, ಬಾವಿಗೆ ಹೋದರೆ ನೀರಿನ ಎಳೆತ, ಮನೆಗೆ ತಡಮಾಡಿ ಹೋದರ ಬೆನ್ನಮೇಲೆ ಸೆಳೆತ, ಇಷ್ಟು ಬಿಟ್ಟು ಜೀವನದಲ್ಲಿ ಇನ್ನಾವ ಎಳತ-ಸೆಳೆತಗಳಿಲ್ಲದ ಏಕಾಕಿನಿ ಮನೆಮಾರು ಬಿಟ್ಟುಹೋದ ಆಕೆಯ ಪತಿ ಕೇಶವಭಟ್ಟರು ಹನ್ನೆರಡು ವರ್ಷಗಳ ಮೇಲೆ ತಂದೆತಾಯಿಗಳನ್ನು ಕಾಣಲು ಬಂದು ಬಲಭೀಮನ ಗುಡಿಯಲ್ಲಿ ತಂಗಿದಾಗ, ತನ್ನ ಗಂಡನೆಂದು ತಿಳಿಯದೆ ಆತನಿಗೆ ಕೈತೋರಿಸಿ " ನನಗೆ ಮಕ್ಕಳಾಗುವವೇ ? " ಎಂದು ಏಕಾಕಿನಿಯು ಕೇಳುವ ಸನ್ನಿವೇಶ, ಕೇಶವ ಭಟ್ಟರು ಮರಳಿ ಬಂದದ್ದಕ್ಕೆ ಊರವರ ಅಪರಿಮಿತ ಸಂಭ್ರಮ, ಪತಿಪತ್ನಿಯರ ಭೆಟ್ಟಿ, ಬೈರಾಗಿಗೆ ಕೈತೋರಿಸಿದ ಕುಂಟುನೆವದಿಂದ ದುರ್ಭಾಗಿನಿಯಾದ ಏಕಾಕಿನಿಯನ್ನು ಬಿಟ್ಟು ಬೈರಾಗಿತನಕ್ಕೆ ಮರುಳಾಗಿ ಮನೆಯ ಹೆಂಗಸಿನ ಹಂಗಿಲ್ಲದೆ ಹೊರಟು ಹೋಗುವ ಕೇಶವಭಟ್ಟರು, ಚಿತ್ರಗಾರ ಪದ್ಮನು ಕನಸಿನಲ್ಲಿ ಕಂಡು ಮನಸಿನಲ್ಲಿ ರೂಪಿಸಿ, ಬಣ್ಣದಲ್ಲಿ ಮೂಡಿಸಿದ " ನಿರಾಭರಣ ಸುಂದರಿ" ಯ ಸುಂದರವಾದ ಚಿತ್ರ, ಆ ಚಿತ್ರದ ಸೆರಗಿಲ್ಲದ ತೋಳು, ಮುಸುಕಿಲ್ಲದ ಎದೆ, ಮರೆಯಿಲ್ಲದ ಕಿಬ್ಬಸಿರು, ಸೀರೆಯಿಲ್ಲದ ತೊಡೆಗಳನ್ನು ಕಂಡು ಜಿಗುಪ್ಸೆಗೊಂಡ ನಾಗಶ್ರೀ, ಈ ರಸಿಕ ದಂಪತಿಗಳ ನಡುವೆ ಈ ಶುಷ್ಕ ಚಿತ್ರದ ಬಗ್ಗೆ ಮನಸೆಳೆಯುವ ಮಾತಿನ ಚಕಮಕಿ, ಚಿತ್ರದ

ಮಸೆದಾಟದಿಂದೆದ್ದ ಬುದ್ಧಿಯ ಶಿಖೆಯು ಭಾವಶಾಬಲ್ಯದ ಹೊ
ಯನ್ನು ಹೊಡೆದು ಹಾಕಿದಾಗ ನಾಗಶ್ರೀಯು ಚಿತ್ರದಲ್ಲಿ ಕಂಡ ವಿಚಿತ್ರ
ವ್ಯಂಗಾರ್ಥ, ತನ್ನನ್ನು ನೂರು ಕನಸುಗಳಲ್ಲಿ ಬೆನ್ನಟ್ಟಿ ಬಂದ ಜೀ
ಯೋಗಿಯ ಆತ್ಮಬಿಂಬದಂತಿರುವ ಆ ಗೊಂಬೆಗೆ ಪದ್ಮನು ಮಾಡು
"ಮಲ್ಲಿ" ಎಂಬ ನಾಮಕರಣ, ಆ ಹೆಸರಿನ ಮೇಲೆ ಕವಿತ್ರಿಯಾ
ನಾಗಶ್ರೀಯು ಕಟ್ಟುವ ಶೀಘ್ರಕವನ, ಇವೆಲ್ಲವೂ ಈ ಏಳ ಕತೆಗ
ವಿಷಯ-ಭಾವ-ಶೈಲಿಗಳ ವೈವಿಧ್ಯವನ್ನು ತೋರ್ಪಡಿಸುವವು.

ಮಗುವಿನ ಕರೆ, ಏಕಾಕಿನೀ, ನಿರಾಭರಣಸುಂದರಿ ಇವು ಉತ್ತಮ
ವಾದ ಕತೆಗಳು. ಮಗುವಿನ ಕರೆಯಂತೂ ಅತ್ಯುತ್ತಮವಾಗಿದೆ. ಇದ
ಲ್ಲಿಯ ಸನ್ನಿವೇಶ ಅಂಬಿಕಾತನಯದತ್ತರ ಜೀವನದಲ್ಲಿಯ ರಸನಿವಿ
ಷದ ಪ್ರತಿಬಿಂಬವಂತೆ. ಇದು ಕತೆಯಲ್ಲ, ಭಾವಗೀತೆ ಎನ್ನುವಷ್ಟು
ರಮ್ಯವಾಗಿದೆ ಆ ಬಡವಿಯ ಮನದಲ್ಲಿ ನಡೆದ ವಿಚಾರಗಳ ಲಹರಿ
ತರಂಗ-ಕಲ್ಲೋಲ-ಕೋಲಾಹಲಗಳನ್ನು ಚಿತ್ರಿಸುವ ಶಕ್ತಿ ಬೆರಟ್ಟು
ಕಚ್ಚಿಸುವಂತಹದು. "ಒಂದು ಕತೆ ಬರೆದವನು ಕತೆಗಾರನೇ ?
ಎಂದು ಕೇಳಿದರೆ "ಹೌದು" ಇಂತಹ ಒಂದು ಕತೆ ಬರೆದವನು ಕತೆ
ಗಾರನಿಷ್ಟೇ ಏಕೆ ಹುಟ್ಟು ಕತೆಗಾರನು" ಎಂದು ನನ್ನ ಉತ್ತರ ನಿರಾಭ
ರಣಸುಂದರಿ ಬೇಂದ್ರೆಯವರು ಬರೆದದ್ದಲ್ಲ, ಅದರ ಲೇಖಕರು ಅಂಬಿ
ಕಾತನಯದತ್ತರು. ಇದು ಕವಿಯು ಬರೆದ ಕತೆ ಪದ್ಮನು ಚಿತ್ರ
ಗಾರ; ನಾಗಶ್ರೀಯು ಕವಯಿತ್ರಿ; ನಿರಾಭರಣಸುಂದರಿಯು ನಗ್ನ
ಚಿತ್ರದ ಜನ್ಮವೇ ಸನ್ನಿವೇಶ, ಈ ಕಲಾಕೃತಿಯ ಬಗ್ಗೆ ರಸಿಕ ದಂಪ
ಗಳ ಚರ್ಚೆಯೇ ಸಂಭಾಷಣೆ; ಕತೆಗಾರರು ಕವಿಗಳು ಹೀಗೆಂದ
ಇದು ರಸಿಕರ ಮನ ಸೂರೆಗೊಳ್ಳುವದೆಂದೂ ಹೇಳಿದಂತಾಯಿತು
ಸಾಮಾನ್ಯ ವಾಚಕರಿಗೆ ಸೇರದೆ ಇರಬಹುದು. ಎಂದೂ ಹೇಳಿದಂತ
ಯಿತು. ನಾಸ್ತಿಕವು ಕತೆಯಲ್ಲ, ವ್ಯಕ್ತಿ ಚಿತ್ರ, ಆದರೆ ಒಮ್ಮೆ ಓದಿದ
ಮರೆಯದಂತಹ ಸರ್ವಾಂಗಸುಂದರವಾದ ವ್ಯಕ್ತಿಚಿತ್ರ ವಾಲಾಘು
ಹಿರಿದ ಕತ್ತಿ, ಮುಂಗಾಟ, ದೋಷರಹಿತವಾಗಿರದಿದ್ದರೂ ದೋಷ
ಕರನಂತೆ ಆಲ್ಹಾದಕರವಾಗಿವೆ; ನಿರ್ದೋಷವಾದ ಕೃತಿಯನ್ನೆ

ನಿರ್ಮಿಸುವೆನೆಂಬ ಪಂಥ ಬೇಂದ್ರೆಯವರದಲ್ಲವಂತೆ !

ಈ ಕತೆಗಳು ದ್ರುತಗತಿಯಿಂದ ಓಡುತ್ತವೆ ಹಿರಿದ ಕತ್ತಿಯ ಪ್ರಾರಂಭವನ್ನು ನೋಡಿದರೆ ಈ ದ್ರುತಗತಿಯ ಕಥಾಸರಣಿಯ ಸಂಪೂರ್ಣ ಪರಿಚಯವಾಗುವದು ಬೇಂದ್ರೆಯವರ ಹಾಸ್ಯ ಈ ಕತೆಗಳಲ್ಲಿಯೂ ಲಾಸ್ಯವಾಡಿದೆ. ಹಳ್ಳಿಯ ಶಾಲೆಯ ದೃಶ್ಯ, ದೇಸಾಯರ ಮೂವರು ಹೆಂಡಿರು ತೀರಿಕೊಂಡ ಕತೆ, ನಾಸ್ತಿಕ ನಾರಾಯಣ ರಾಯರನ್ನು ಸತ್ತನೇಲೆ ಸುಡಬೇಕೋ ಹುಗಿಯಬೇಕೋ ಎಂಬ ಪುರೋಹಿತರಿಬ್ಬರ ಸಂಶಯ, ರಾಯರು ಮಾಡಿದ ಅದರ ನಿವಾರಣೆ, ನಾರಾಯಣರಾಯರು ಸಾಯುವಾಗ ಉಸುರಿದ ‘ ನಾರಾಯಣ ’ ಎಂಬ ಒಂದು ಶಬ್ದಕ್ಕೆ ಜನರು ಮಾಡಿದ ಬಗೆಬಗೆಯ ಅರ್ಥ, ಸಣ್ಣ ರಾಯರ ಅಪ್ರತಿಮ ಪ್ರತಾಪದ ವರ್ಣನೆ, ನಾಗಶ್ರೀ-ಪದ್ಮರ ಸರಸ ಸಂಭಾಷಣ—ಇವೆಲ್ಲವೂ ಬೇಂದ್ರೆಯವರ ಬಹುಮುಖವಾದ ಹಾಸ್ಯದ ಉದಾಹರಣೆಗಳು ವರ್ಣನೆಗಾಗಿ ವರ್ಣನೆ ಇಲ್ಲದಿದ್ದರೂ ಈ ಕತೆಗಳಲ್ಲಿ ರಮ್ಯವರ್ಣನೆಗಳು ಧಾರಾಳವಾಗಿವೆ ಕಾರಹುಣ್ಣಿವೆಯ ಬೆಳದಿಂಗಳಲ್ಲಿ ಹಾರಾಡುತ್ತ ಚೀರಾಡುತ್ತ ಬೈದಾಡುತ್ತ ತಿಳ್ಳಿಯಾಡುವ ಹುಡುಗರ ವರ್ಣನೆ ‘ ಏ. ಈ ’ ಯವರ ( Frolic ) ಎಂಬ ಕವಿತೆಯನ್ನು ನೆನಪಿಗೆ ತರುವಷ್ಟು ಕಾವ್ಯಮಯವಾಗಿದೆ. ನಿರಾಭರಣಸುಂದರಿಯ ನಗ್ನಚಿತ್ರದ ವರ್ಣನೆ, ಅದರ ವ್ಯಂಗಾರ್ಥದ ವರ್ಣನೆಯಷ್ಟೆ ಮೋಹಕವಾಗಿದೆ ಮಗುವಿನ ಕರೆಯಲ್ಲಿ ಶಾಸ್ತ್ರಿಗಳ ಮನೆಯ ವರ್ಣನ, ಹೌಹಾರಿ ಸ್ತಂಭಿತಳಾಗಿ ಮುಂಗಾಣದೆ ಯಜಮಾನರ ಬರವನ್ನೇ ಎದುರು ನೋಡುವ ಏಕಾಕಿನಿಯ ವರ್ಣನೆ— ಇವು ಎತ್ತಿ ತೋರಿಸುವಷ್ಟು ಉತ್ತಮವಾಗಿವೆ

ಈ ಕತೆಗಳ ಶೈಲಿಯ ವೈಶಿಷ್ಟ್ಯವನ್ನಾಗಲಿ ಬೇಂದ್ರೆಯವರ ಗದ್ಯ ಶೈಲಿಯ ವೈವಿಧ್ಯ ವೈಶಿಷ್ಟ್ಯಗಳನ್ನಾಗಲಿ ಚರ್ಚಿಸಲಿಕ್ಕೆ ಮುನ್ನುಡಿಗಿಂತ ಹೆಚ್ಚಿನ ಅವಕಾಶ ಬೇಕು ಕವಿಗಳ ಗದ್ಯ ನೋಡಬಾರದು, ಗದ್ಯಲೇಖಕರ ಪದ್ಯ ನೋಡಬಾರದು ಎಂದು ಹೇಳುತ್ತಾರೆ ಬೇಂದ್ರೆ

ಯವರ ಮಟ್ಟಿಗೆ ಈ ಮಾತು ಸತ್ಯವಲ್ಲ. ಬೇಂದ್ರೆಯವರು ಗದ್ಯವನ್ನೂ ಪದ್ಯವನ್ನೂ ಅಷ್ಟೇ ನೈಜವಾಗಿ ರಮ್ಯವಾಗಿ ಬರೆಯಬಲ್ಲ ಸವ್ಯಸಾಚಿಗಳು. ಇವರ ಗದ್ಯ ಅಲಂಕಾರಿಕ ಗದ್ಯ, ಹೃದ್ಯ ಗೃದ್ಯ. ವಕ್ರೋಕ್ತಿಯ ರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು, ಉಪಮೆ ರೂಪಕಾದಿಗಳು–ಎಲ್ಲವನ್ನೂ ಬಳಸಿಕೊಳ್ಳುತ್ತಾರೆ ಶ್ಲೇಷವಂತೂ ಶೈಲಿಯ ಗುಣವಲ್ಲ, ಮನೋಧರ್ಮವೆನ್ನುವಷ್ಟು ವಿಪುಲವಾಗಿದೆ

ಬೇಂದ್ರೆಯವರ ಕವಿತೆಗಳನ್ನು ಕೇಳಿದರೆ ಇವರು ಕವಿತೆಗಳನ್ನೇ ಬರೆಯಲಿ ಎನಿಸುತ್ತದೆ ಹರಟೆಗಳನ್ನು ಓದಿದರೆ ಇವರು ಹರಟೆಗಳನ್ನೇ ಹೊಸೆಯಲಿ ಎನಿಸುತ್ತದೆ. ಕತೆಗಳನ್ನು ನೋಡಿದರೆ ಇವರು ಎಲ್ಲ ಬಿಟ್ಟು ಕತೆಗಳನ್ನೇಕೆ ಬರೆಯುವದಿಲ್ಲ, ಎನಿಸುತ್ತದೆ. ಆಡು ಮುಟ್ಟದ ಗಿಡವಿಲ್ಲ, ಬೇಂದ್ರೆಯವರು ಕೈ ಹಾಕದ ಸಾಹಿತ್ಯಪ್ರಕಾರವಿಲ್ಲ. ಮುಟ್ಟಿದ ಮಣ್ಣನ್ನು ಚಿನ್ನ ಮಾಡುವ ಕೈಚಳಕ ಇವರದು ಬೇಂದ್ರೆಯವರು ಇನ್ನೂ ಸಾವಿರಾರು ಕವನಗಳನ್ನು ಬರೆಯಲಿ; ನೂರಾರು ಹರಟೆಗಳನ್ನು ಹೊಸೆಯಲಿ, ಕತೆಗಳ ಸಂತೆಯನ್ನೇ ನಿರ್ಮಿಸಲಿ, ಇಷ್ಟೆಲ್ಲ ಮಾಡಲು ಆ ಪರಮಾತ್ಮನು ಇವರಿಗೆ ದೀರ್ಘಾಯುಷ್ಯವನ್ನು ದಯಪಾಲಿಸಲಿ

ಧಾರವಾಡ,
೧೫—೮—೪೦

**ಕೆ. ಆರ್. ಮಹಿಷಿ**

# ನನ್ನ ನುಡಿ

ಅಂತೂ "**ನಿರಾಭರಣಸುಂದರಿ**" ಒಮ್ಮೆ ಪ್ರಕಾಶಕ್ಕೆ ಬಂದದ್ದಾಯಿತು ಎಂದೆಂದೋ ಬರೆದ ಹರಟೆ, ನಗೆವಾಡು, ಕತೆ ಗೀತೆಗಳು ಒಂದಾಗಿ ಇಲ್ಲಿ ಬಂದಿವೆ. ಇಲ್ಲಿಯ ಏಳು ಕತೆಗಳಲ್ಲಿ ಆರು ಅಪ್ರಕಾಶಿತವಾದವುಗಳು ಮನದಿಂದಿಳಿದು ಮಸಿಯಲ್ಲಿ ಮೂಡಬೇಕಾದರೆ ಬಹಳ ವರ್ಷ ಕಳೆದವು. ಬರೆದ ಮೇಲೆಯೂ ಇದ್ದಲ್ಲಿಯೇ ಬಿದ್ದುಕೊಂಡಿದ್ದವು ಕೆಲವು ವರ್ಷ ನಾನು ಬರೆದುದು ಸಾರ್ಥಕವೊ ನಿರರ್ಥಕವೊ ಸಹೃದಯರೂ ವಿಮರ್ಶಕರೂ ಇನ್ನು ಮೇಲೆ ಹೇಳಬೇಕು. ನಾನು ಆ ಕತೆಗಳ ಋಣದಿಂದ ಮುಕ್ತನಾಗಿದ್ದೇನೆ. ನನಗೆ "ಕವಿ" ಯೆನ್ನುತ್ತಾರೆ "ಕತೆ" ಗಳಿಗೆ ಕೈಹಾಕಬಾರದು ಎಂಬ ವಿಮರ್ಶಕ ವಿವೇಕವು ಉಳಿಯದಂತೆ ನನ್ನನ್ನು ಆ ಕತೆಗಳೆ ಕಥನಕ್ಕೆ ಪ್ರೇರಿಸಿವೆ. ಗುಣಾಢ್ಯ ತಾನು ಕೇಳಿದ ಕತೆಗಳನ್ನು ಹೇಳಿ ಮುಕ್ತನಾದನಂತೆ. ನಮ ನಮಗೆ ಬಂದು ಬಡೆದುಕೊಂಡ ಕತೆಗಳಿಂದ ಬಿಡಿಸಿಕೊಳ್ಳಬೇಕಾದರೆ ಆಡಿತೋಡಿಕೊಳ್ಳುವದೇ ಹಾದಿ. ನನಗಾಗಿ ಅಲ್ಲದಿದ್ದರೂ ಆ ಕತೆಗಳಿಗಾಗಿ ನಾನು ಇನ್ನೂ ಕೆಲ ಕತೆಗಳನ್ನು ಬರೆಯಬೇಕಾಗಿದೆ ಇದು ಅದರ ಸಂಚಕಾರ.

ನನ್ನ ಗೆಳೆಯರಾದ ಮಹಿಷಿ ಕೃಷ್ಣರಾಯರು ಚಿಕ್ಕವರಾದರೂ ಚುರುಕು ಬುದ್ಧಿಯವರು. ಚತುರರು. ಸಾಹಿತ್ಯದ ಪ್ರೀತಿಯುಳ್ಳವರು, ಹಾಸ್ಯಗಾರರು ಅವರಲ್ಲಿ ವಿಮರ್ಶಕ ಶಕ್ತಿಯಿದೆ. •ಅದರ ನಿರಂತರ ಸದುಪಯೋಗ **ನಡೆಯಬೇಕು** ಎಂದು ಅವರ ಬೇರೆ ಗೆಳೆಯರಂತೆ ನಾನೂ ಆಶಿಸಿದ್ದೇನೆ. ಅವರ ವಿಮರ್ಶಕ ವಿಲಾಸಕ್ಕೆ ನನ್ನನ್ನೊಡ್ಡಿಯಾದರೂ ಅವರ ಕಾರ್ಯ ನಡೆಯುವಂತಾಗಲಿ ಎಂದು ನಾನು ಬಯಸಿದ್ದೆ. ಅದು ಇಲ್ಲಿ ಕೆಲಮಟ್ಟಿಗೆ ಸಫಲವಾಗಿದೆ. ಅವರ ಬರವಣಿಗೆ ಸಾಗಿದರೆ ಎಷ್ಟೋ ಕೆಲಸವಾದೀತು. ಅವರ ಮುನ್ನುಡಿಯಲ್ಲಿ ಆದರದ ಅಲಂಕಾರಗಳಿವೆ, ಆಶೆಯ ಆಶೀರ್ವಾದಗಳಿವೆ. ಅಲಂಕಾರದೊಡನೆ "ಅಲಾವರ್ನ್ಸ" ಇವೆ; ಆಶೀರ್ವಾದಗಳೊಡನೆ ಬುದ್ಧಿವಾದಗಳಿವೆ ನಾನು ನನ್ನ ಯಾವ ಕೃತಿಗಳೂ ನಿರ್ದುಷ್ಟವಾಗಿವೆಯೆಂದು ಬಗೆದಿಲ್ಲ ಹೊಲೆಯಿಲ್ಲದೆ ಹುಟ್ಟಿಲ್ಲ; ದೋಷವಿಲ್ಲದ ಕೃತಿಯಿಲ್ಲ ದೋಷಗಳಿಗಾಗಿ ನಾನು ಹೆಮ್ಮೆ ಪಡುವದಿಲ್ಲವಾದರೂ ಅವು ಸೃಷ್ಟಿ ಕರ್ಮದಲ್ಲಿ ಸಹಜವಾಗಿವೆ ಎಂದು ಸೂಚಿಸುತ್ತೇನೆ. ಈ ಅರ್ಥದಲ್ಲಿ ಸಾಹಿತ್ಯವು ಪ್ರಕೃತಿ; ವಿಮರ್ಶೆಯು ಸಂಸ್ಕೃತಿ, ವಿಮರ್ಶೆಯು ಕಲಾಯುಕ್ತವಾದಷ್ಟು ಸಾಹಿತ್ಯದಲ್ಲಿ ಪರಿಪಾಕವು ಮಧುರವಾಗುವದು. ನಮ್ಮ ಕನ್ನಡದಲ್ಲಿಯೂ ಅದಾಗಲಿ ಎಂದೆ ನನ್ನ ಹಾರೈಕೆ.

ನನ್ನ ಹರಟೆ, ಹಾಡುಗಳನ್ನು ಮೊದಲು ಪ್ರಕಟಿಸಿದ ಪತ್ರಿಕಾಕರ್ತರ ಸಜ್ಜನಿಕೆಗಾಗಿ ನಾನು ಉಪಕೃತನಾಗಿದ್ದೇನೆ. ಇಲ್ಲಿಯ ನನ್ನ ಕತೆಗಳು ಸಹೃದಯರಿಗೆ ಸ್ವಲ್ಪಾದರೂ ಸಂತೋಷವನ್ನುಂಟು ಮಾಡುವವೆಂದು ನಾನು ನಂಬಿದ್ದೇನೆ.

೧೭—೮—೪೦ —**ದ. ರಾ. ಬೇಂದ್ರೆ**

# ಮಾರಾಟಕ್ಕೆ ಸಿದ್ಧವಾಗಿದೆ

ವೈದಿಕ ಮನುಮಂಥನದಲ್ಲಿ ಹೊರಟ

—ಗ್ರಂಥ ಸೋಮ—

ಶ್ರೀ ಸತ್ಯಕಾಮರ

# ಋಷಿ ಪಂಚಮಿ.

[ ವೇದಗ್ರಂಥ ]

**ಕನ್ನಡ ಸಾಹಿತ್ಯದಲ್ಲಿ ಗಂಭೀರ**

**.... ವಿವೇಚನೆಯ ಅನುಪಮ ಕೃತಿ ....**

---

# ನಮ್ಮ ಮುಂದಿನ ಪ್ರಕಟನೆ

ಕಾದಂಬರಿ ಮನೋವಿನೋದ ಹೇತುವಲ್ಲ

**ಜೀವನ ಸಾಧನೆಯ ಸಾರವು.**

# ಮರಣದಾಚೆ [ ಕಾದಂಬರಿ ]

ಲೇಖಕರು.—ರಾಜ

## ಸಮನ್ವಯ ಪ್ರಕಾಶನ, ಗದಗ.

# ಅರ್ಪಣ

**ಮರ ತಾ ನಿಂತ ನೆಲಕ್ಕಲ್ಲದೆ ಬೇರೆಯದಕ್ಕೆ ಫಲವೀಯುತೆ ?**

## ಅಣ್ಣಾ ಮಾಸ್ತಿಯವರಿಗೆ



ನೀನು ರವಿಯಂತಿರುವೆ
ನಾನು ಮಳೆಬಿಲ್ಲು
ನೀನು ಬೆಂಕಿಯ ಪಿಂಡ
ನಾನೀರು ಮಂಜು

ಬಯಲೆ ಮನೆ ನಿನಗೆನಗೆ
ಮುಗಿಲೆ ಗೋಡೆ
ನೀನೆತ್ತ ನಾನೆತ್ತ
ಬಗೆದು ನೋಡೆ !

ನೀನು ಒಂದೇ ಬೆಳಕು
ನಾನು ಹಲ ಬಣ್ಣ
ನಾನು ಬೆಳೆಯುವ ತಮ್ಮ
ನೀನು ಬೆಳೆದಣ್ಣ

—ಅಂಬಿಕಾತನಯದತ್ತ

# ನಿರಾಭರಣ ಸುಂದರಿ

ನಾಗಶ್ರೀಯು ಮೊದಲು ನಿದ್ದೆಮಾಡಿ ಎದ್ದಾಗ ಪದ್ಮನು ಇನ್ನೂ ಚಿತ್ರವನ್ನು ಬರೆಯುತ್ತಲೇ ಇದ್ದನು "ಮಧ್ಯರಾತ್ರಿಯಾಗಿ ಹೋಗಿದೆ, ಆದರೂ ಇದೇನು ಚಿತ್ರದ ಧ್ಯಾನ!" ಎಂಬೊಂದು ಕುತೂಹಲವು ಇನ್ನೂ ಹಾಸಿಗೆಯಲ್ಲಿದ್ದ ನಾಗಶ್ರೀಯ ಅರೆತೆರೆದ ಕಣ್ಣುಗಳನ್ನು ಒಂದಿಷ್ಟು ಅರಳಿಸಿತು ಪದ್ಮನು ಒಂದೆರಡು ಕುಂಚಗಳನ್ನೆಳೆಯುವದು, ಒಂದು ಕ್ಷಣ ನೋಡುವದು, ಮತ್ತೆ ಕುಂಚ ಎತ್ತುವದು, ಒಂದು ಕ್ಷಣ ಕಣ್ಣು ಮುಚ್ಚುವದು, ತಿದ್ದುವವನಂತೆ ಗೆರೆ ತೀಡುವದು, ಮತ್ತೆ ನೋಡುವದು,—ಹೀಗೆ ಸಾಗಿಸಿದ್ದನು. ಅವನ ಬಣ್ಣವಣ್ಣಿಗೆಯ ಸ್ಪರ್ಶ ಸ್ಪರ್ಶಕ್ಕೂ ಚಿತ್ರದ ರೂಪು ಕಣ್ದೆರೆಯುವಂತಿತ್ತು. ಅವನ ಚಿತ್ತದೊಳಗಿನ ಮೂರ್ತಿಯು ಚಿತ್ರದಲ್ಲಿ ಮೂಡಿದಂತೆ, ಅವನ ಮುಖದಲ್ಲಿ ತೃಪ್ತಿಯು ತುಂಬುತ್ತಿತ್ತು. ಕಣ್ಣಿನ ಬಣ್ಣವೇರುತ್ತಿತ್ತು. ನಾಗಶ್ರೀಗೆ ಬಿದ್ದುಕೊಂಡಿರುವದಾಗಲಿಲ್ಲ. ಹೆರಿಗೆಯಂತೆ ಕೃತಿಯ ಜನ್ಮಕ್ಕೂ ಏಕಾಂತವು ಬೇಕೆಂಬುದನ್ನು ಅವಳು ಬಲ್ಲಳು. ಆದರೂ ತಾನು ಹತ್ತಿರ ಹೋಗುವದು ಆಪ್ತಳಂತೆ, ಸೂಲಗಿತ್ತಿಯಂತೆ ಎಂದುಕೊಂಡಳು. ತನ್ನ ಗಂಡನ ಶಿಲ್ಪತಪಸ್ಯೆಯಲ್ಲಿ ಅಪ್ಸರೆಯಾಗಿ ಅಡ್ಡಬರುವ ಪ್ರಕೃತಿ ಅವಳದಲ್ಲ. ತತ್ತಿಯನ್ನೊಡೆದು ಮರಿಯನ್ನು ಹುಡುಕಾಡುವ ಅಸಿವಸಿಯ ಅವಿವೇಕವು ಅವಳಿಗೆ ಹೊರತು. ಆದರೆ ಯಜಮಾನರ ಮುಖದೊಳಗಿನ ಹಿಗ್ಗಿನ ಹೇಂದಾಟ

ನೋಡಿದರೆ ಚಿತ್ರಶಾವಕವು ಇನ್ನೂ ಹಾರಾಡುತ್ತಿರುವಂತೆ ತೋರದಿದ್ದರೂ, ಗರಿತುಂಬಿ, ಕಾಲಿಕ್ಕಿ, ಕತ್ತೆತ್ತಿ ಕಂಗೊಳಿಸುತ್ತಿರಬೇಕು ಎನುವಂತಿತ್ತು ಈಗ ಮಾತನಾಡಿಸಿದರೆ ಅವರ ಸಮಾಧಿಗೆ ಭಂಗ ಬರಲಾರದು ಆಕೆ ಎಂದುಕೊಂಡಳು ಆದರೆ ಅವನ ತನ್ಮಯತೆಯನ್ನು ನೋಡಿ ಹಾಗೆ ಮಾಡಬೇಕೋ ಇಲ್ಲವೋ ಎಂಬ ಯೋಚನೆ ಬಂತು. ಏಳಬೇಕೆಂದರೆ ತರ್ಕವು ಅಡ್ಡಬರುತ್ತಿತ್ತು; ಬಿದ್ದುಕೊಂಡಿರುವದು ಸಾಧ್ಯವಿರಲಿಲ್ಲ ಹೀಗೆ ನಾಗಶ್ರೀಯು ಅನಿಶ್ಚಯದ ತೂಗುಮಂಚದಲ್ಲಿ ಹೊರಳಾಡುತ್ತಿದ್ದರೂ ಅದರ ಸುಳಿವೂ ಪದ್ಮನನ್ನು ಸೋಂಕಲಿಲ್ಲ

ಪದ್ಮನ ಚಿತ್ರಲೋಕದಲ್ಲಿ ಕಾಲನ ಹೆಜ್ಜೆಗುರುತು ಇರಲೇ ಇಲ್ಲ ಅವನು ಬಣ್ಣ-ಕುಂಚಗಳನ್ನುಪಯೋಗಿಸುತ್ತಿದ್ದುದು ನಿದ್ದೆ ಹೋದವನು ಉಸಿರಾಡಿಸಿದಂತೆ, ಪ್ರಕೃತಿಗತ ಕರ್ಮವೆಂದು; ಅವನ ರೂಪವಿಮರ್ಶೆಯು ನಾಡಿ ಸ್ಪಂದನದಂತೆ, ಅವನ ತೃಪ್ತಿಯು ಆರೋಗ್ಯವಂತನ ರುಧಿರಾಭಿಸರಣದಂತೆ, ಅವನು ತೀಡುವದು ತಿದ್ದುವದು ಪಚನಕ್ರಿಯೆಯಂತೆ, ಅವನು ಚಿತ್ರವನ್ನು ಕಾಣುತ್ತಿದ್ದುದು ಚಂದ್ರಸೂರ್ಯರ ಬೆಳಕಿನಲ್ಲಲ್ಲ, ಚಿತ್ತದ ಆಕಾಶದಲ್ಲಿ, ಬುದ್ಧಿಯ ಪ್ರಕಾಶದಲ್ಲಿ. ಸ್ಫಟಿಕವು ತಾನು ತಾನೇ ನುಣುಪುಗೊಳ್ಳುತ್ತ ಮುಂದಿದ್ದ ಒಡವೆಯನ್ನು ಮೂಡಿಸಿ ತೋರಿಸಬೇಕೆಂದು ಹವಣಿಸುತ್ತಿರುವಂತೆ ಅವನ ಕರ್ಮಕೌಶಲ್ಯವೆಲ್ಲವೂ ರೂಪಸಿಸೃಕ್ಷೆಯಲ್ಲಿ ತಲ್ಲೀನವಾಗಿತ್ತು. ಇರುಳ–ಮುಸುಕು ಮುಗಿಲ–ಮೈಯಿಂದ ಜಾರುತ್ತಿತ್ತು ಅವನಿಗೆ ಅದರ ಅರಿವಿರಲಿಲ್ಲ ಹಿಂದೆ ತಪ್ಪಿಯಾದರೂ ಅವನು ಹೊರಳಿದರೆ ಮಾತನಾಡಿಸಬೇಕೆಂದು ಅವಳು ಕಾದಿದ್ದಳು. ಅವನಿಗೆ ಅವಳ ಅರಿವಿರಲಿಲ್ಲ ಚಿತ್ರವು ಚಿತ್ರಿಕನನ್ನೇ ನುಂಗಿದಂತಿತ್ತು. ಅವನಿಗೆ ತನ್ನರಿವೂ ಇರಲಿಲ್ಲ

ನಾಗಶ್ರೀಗೆ ಅವನ ಅನನ್ಯಲಕ್ಷ್ಯವು ತನಗೆ ಅಲಕ್ಷ್ಯವಾಗಿದ್ದುದರಿಂದ ಅಸಮಾಧಾನವನ್ನುಂಟುಮಾಡಿತು. ತಾನು ಎಚ್ಚೆತ್ತು ಅರ್ಧ ಗಂಟೆಯಾಗಿರಬಹುದು. ಒಮ್ಮೆಯಾದರೂ ಅವನು ಹಾಸಿಗೆಯ

ಕಡೆಗೆ ನೋಡದಿದ್ದುದು ಆಶ್ಚರ್ಯವೆನಿಸಿತು. ತಾನು ನಿದ್ದೆಹೋಗುವ ಮೊದಲು ಮಾತನಾಡಿಸದೆ ಬಂದುದೇ ತಪ್ಪು ಎನಿಸಿತು ಆದರೆ ಈ ಮೊದಲು, ಕಲೆಯ ಈ ಅವತಾರವನ್ನು ಅವಳು ಕಂಡಿರಲಿಲ್ಲ. ಅವಳು, ಇನ್ನು ಏನೇ ಆಗಲಿ, ಮಾತನಾಡಿಸಿ ನೋಡಬೇಕೆಂಬ ನಿಶ್ಚಯದಿಂದ ಎದ್ದಳು, ಕುಳಿತಳು, ಮಂಚದಿಂದಿಳಿದಳು ಅವನ ಕಡೆಗೆ ನಾಲ್ಕು ಹೆಜ್ಜೆ ಹೋದಳು ಮಾತನಾಡಿಸಬೇಕೆಂದು ತುಟಿ ತೆರೆಯುವ ಹೊತ್ತಿಗೆ ಚಿತ್ರದ ವಸ್ತುವಾದರೂ ಏನು, ಒನ್ಮೆ ನೋಡೋಣ, ಎಂದು ಕಾಲಿಕ್ಕಿ, ಹಣಿಕಿ ನೋಡಿದಳು ವಿಪುಲವಾದ ಕೇಶರಾಶಿ ಕತ್ತಲನ್ನೇ ಬಾಚಿ ಹಿಕ್ಕಿ ಓರಣಗೊಳಿಸಿದಂತೆ ಕಂಡಿತು ನಡುವೆ ಬೈತಲೆ—ಕತ್ತಲಲ್ಲಿ ಕಿರಣ ಹೊಕ್ಕಂತೆ. ಮುಂದೆ ಸರಿದು ನೋಡಿದಳು. ನಿರ್ವಾತದೀಪದ ಕೆಂಪು ಕುಡಿಯಂತೆ ಹನೆತುಂಬ ಪ್ರಭೆ ಬೀರಿದ ಉದ್ದ ಕುಂಕುಮ, ಅದನ್ನು ಎತ್ತಿ ತೋರಿಸುವಂತೆ ಎರಡೂ ಬದಿಗೆ ಕುಡಿ ಹುಬ್ಬು, ಕೆಳಗೆ ತುರುಗಿದನೆಗಳ ವಕ್ರರೇಖೆ, ಅದರ ಮರೆಯಲ್ಲಿ ದೃಷ್ಟಿಯು ಬಿದಿಗೆಯ ಚಂದ್ರನ ತರಹ ಒಂದಿಷ್ಟೆ ಕಂಡರೂ ಕಂಡಷ್ಟರಲ್ಲಿಯೇ ಪೂರ್ಣಬಿಂಬದ ಮುದ್ರೆಯಿರುವಂತೆ, ಆದರೆ ಇಬ್ಬರು ಬಿದಿಗೆ ಚಂದ್ರಮರು ಬದಿಬದಿಗೆ ಉದಿಸಿದಂತೆ ನೋಟದ ರೀತಿಯು ಬಹಳೇ ಮನೋಹರವಾಗಿತ್ತು ಎರಡೂ ಕಣ್ಣಿನ ಕಿರಣಗಳು ಮೂಗಿನ ಗೊನೆಗೆ ಕೂಡಿ ನೇರವಾಗಿ ಎದೆಯ ನಡುವೆ ಧುಮುಕಿಕೊಳ್ಳುವಂತೆ ಈಗ ಅವಳು ಅವನ ತೀರ ಹತ್ತಿರಕ್ಕೆ ಬಂದಳು ಏನೀ ಚಿತ್ರ! ನೆರಗಿಲ್ಲದ ತೋಳು, ಮುಸುಕಿಲ್ಲದ ಎದೆ, ಮರೆಇಲ್ಲದ ಕಿಬ್ಬಸಿರು, ಸೀರೆಯಿಲ್ಲದ ತೊಡೆ! ಅವಳಿಗೆ ಎಲ್ಲವೂ ವಿಕಾರ ವಿಕಾರವಾಗಿ ತೋರಿತು. ಇಂಥ ಚಿತ್ರ ಬರೆಯುವದರಲ್ಲಿ ತೊಡಗಿದ ತನ್ನ ಗಂಡನ ಬಗ್ಗೆ ಜುಗುಪ್ಸೆ ಉಂಟಾಯಿತು ಅವನ ಕರ್ಮತತ್ಪರತೆಯು ಅಸಹ್ಯವೆನಿಸಿತು. ಅವನ ಇಷ್ಟು ಹೊತ್ತಿನ ಅಗಲಿಕೆಯು ಅಕ್ಷಮ್ಯವಾಗಿ ಬಿಟ್ಟಿತು.

"ಇದೆಯೇ ತಾವು ಇದೂವರೆಗೆ ಮಾಡುತ್ತ ಇದ್ದದ್ದು?"

ಅವಳು ತಿರಸ್ಕಾರದ ತಣ್ಣುಸಿರಿನೊಡನೆಂದಳು

ನಿದ್ದೆಯೊಳಗೆ ಮಗ್ಗಲಿಂದ ಮಗ್ಗಲಿಗಾಗುವಾಗ ಕನವರಿಸುವರಂತೆ ಅವನು ಸುಮ್ಮನೆ " ಏನು ? " ಎಂದ.

ಇಗೋ ಇತ್ತ ಕಡೆಗೆ ನೋಡಿ. ಸ್ವಲ್ಪ ಮುಖ ನೋಡೋಣ

ತನ್ನ ಗಂಡನು ಕೆಲಸದಲ್ಲಿ ತೊಡಗುತ್ತಿಲ್ಲ, ಅಡಗುತ್ತಿದ್ದಾನೆ ನಾಚಿಕೆಯಿಂದ ಮೋರೆ ತೋರಿಸಲಾಸದೆ, ಎಂದು ಅವಳಿಗೆ ಕ್ಷಣಕಾಲ ಎನಿಸಿರಬೇಕು

' ಸ್ವಲ್ಪ ತಡೆ , ಎಂದು ಅವನು ಆ ಚಿತ್ರದ ಅಡಿ ತೀಡಿದನು. ಅಡಿಯ ಕೆಳಗಿರುವ ನೀಲಜಲಧಿಯ ತೆರೆಯ ತಲೆಯ ನೊರೆಯ ಬಿಳುಪನ್ನು ಇನ್ನಿಷ್ಟು ತಿಳುವು ಮಾಡಿದನು ಚಿತ್ರದ ಹಿಂದಿನ ಕೆಂಪಿನಲ್ಲಿ ಇನ್ನೊಂದಿನಿಸು ಕಪ್ಪು ಬೆರೆಸಿ; ಕುಗ್ಗುವ ಸಂಜೆಗೆಂಪಿನ ಕಳೆ ಕಟ್ಟಿದನು ಅದರ ಹೊರವಳಯದ ಹಳದಿಯಲ್ಲಿ ಹೊಂಬಣ್ಣದ ಮಿಂಚು ಹಾಕಿದನು. ನಾಗಶ್ರೀಗೆ ಈ ಸಂಭ್ರಮವೆಲ್ಲ ದುಗ್ಗಾಣಿಯ ಗೊಂಬೆಗೆ ಬಂಗಾರದ ಮಂಟಪ ಕಟ್ಟುವಂತೆ ಹಾಸ್ಯಾಸ್ಪದವಾಗಿ ತೋರಿತು ಅವಳು ಮಾತಾಡಲು ಅಧೀರಳಾದಳು. ಅವನ ಎಡ ಹೆಗಲ ಮೇಲೆ ಕೈಯಿಟ್ಟು " ಒಂದು ಮಾತು ಕೇಳತೇನಿ ಹೇಳತೀರಾ ? " ಎಂದು ಆದಷ್ಟು ಮೆತ್ತಗೆ ಕೇಳಿದಳು.

ಆ ಮಧು ಸ್ಪರ್ಶದಿಂದಲೂ ಮೃದು ಧ್ವನಿಯಿಂದಲೂ ಪದ್ಮನಿಗೆ ಎಚ್ಚರ ಉಂಟಾಯಿತು. ಅವನು ನಸು ನಗುತ " ಏನು ? " ಎಂದ.

" ಅಲ್ಲ , ಇದೇನು ಕೂಸಿನ ಚಿತ್ರವೋ ? ಏನು ಹುಡುಗಿಯದೋ ? ಏನು ಹುಚ್ಚಿಯದೋ ? "

' ಯಾಕೆ ಬಹಳ ಉತ್ಪ್ರೇಕ್ಷೆ ನಡೆಯಿತು ? '

" ಇಲ್ಲ, ಏನಿದೂ ಎಂದೆ ? "

" ನಿನಗೆ ತೋರುವದೇನು ? "

" ನಿಶ್ಚಯವಾಗಿ ಒಂದಾದರೂ ತೋರಿದ್ದರೆ, ಕೇಳುವ ಕಾರಣವೇ ಇರಲಿಲ್ಲ. "

" ಅದು ಹೇಗೆ ? "

‘ ಕೂಸೆನ್ನಬೇಕೇ ?—ಎದ್ದು ನಿಂತಿದೆ ಹುಡುಗಿಯೆನ್ನಲೇ ?–ಎದೆ ಅಡ್ಡಬರುವದು; ಹುಚ್ಚಿಯೆನ್ನಲೇ ?—ಮುಖಮುದ್ರೆ ಹಾಗಿಲ್ಲ ’

“ ಸರಿ ಹಾಗಾದರೆ, ಇದು ಅದೊಂದೂ ಅಲ್ಲ ”

“ ಇದರ ಹೆಸರೇನು ? ”

“ ಮನುಷ್ಯ ಕೂಡ ತನ್ನ ಮಕ್ಕಳಿಗೆ ಹತ್ತು ದಿವಸದ ಮುಂಚೆ ಹೆಸರಿಡುವದಿಲ್ಲ. ನಾನು ಇದನ್ನು ಮುಗಿಸಿ ಹತ್ತು ನಿಮಿಷಗಳೂ ಆಗಿಲ್ಲವಲ್ಲ ! ಚಿತ್ರ ಹೇಗಿದೆ, ಹೇಳು ? ”

“ ಚಿತ್ರವೇನೋ ಪಿತ್ರವಾಗಿದೆ. ಆದರೆ ಹೆಸರೇನು, ತಿಳಿಯಲಿ? ”

“ ಹುಡುಗಿ ಹೇಗೆ ಕಾಣುತಾಳೆ ಎಂದರೆ ಹೆಸರೇನು ಎಂದು ಕೇಳಿದಂತಿದೆ ಈ ರೀತಿ ”

“ ಹಾಗಲ್ಲದೇನು ? ಹೆಸರು ಹೇಳದೆಯೆ, ಇದೇನು ಎಂಬದು ತಿಳಿಯದ, ಮಕ್ಕಳ ಚಿತ್ರದ ಹಾಗಿದೆ ಈ ಶಿಲ್ಪಶೈಲಿ ”

‘ ಹೀಗೇನು ? ಇದು ಚಿತ್ರವೆಂಬುದಾದರೂ ಒಪ್ಪಿಗೆಯೇ ? ’

‘ ಹೂಂ, ಕವಿ ಬರೆದದ್ದೆಲ್ಲ ಕವಿತೆ ಎಂದ ಹಾಗೆ, ಇದೂ ಚಿತ್ರ!’

‘ ಅಬ್ಬ ! ’

ಯಾಕೆ, ಆಶ್ಚರ್ಯೋದ್ಗಾರ ? ದೇವತೆ ಎನ್ನಬೇಕೇ ?—ಇಂಥ ನಾಚಿಕೆ ಬಿಟ್ಟದ್ದನ್ನು ಪುರಾಣದಲ್ಲಿ ಕೇಳಿಲ್ಲ, ಶಿಲ್ಪದಲ್ಲಿ ನೋಡಿಲ್ಲ ಮನುಷ್ಯ ಎನ್ನಬೇಕೇ ?—ಪಿಂಡವಾಗಿ ಬೆಳೆದಂತೆ ಕಾಣುವದಿಲ್ಲ; ನರ ವಿಲ್ಲ ನವಿರಿಲ್ಲ, ಅಕ್ಕಿಯ ಮುಂದೆಯಿಂದ ಕಟ್ಟಿದ ಹಾಗಿದೆ. ಮೈ, ಕೈ, ಕಣ್ಣು, ಮೂಗು, ಲೆಕ್ಕಹಾಕಿ ಬರೆದಂತಿದೆ ’

‘ ಸರಿ, ಅದಕ್ಕೇ ಶುದ್ಧ ಚಿತ್ರ ಎಂಬೋದು. ಇಲ್ಲದಿದ್ದರೆ ಉಸಿರಾಡಿಸುವ ಹೆಣ್ಣಾಗಿ ಬಿಡುತ್ತಿತ್ತು ! ’

‘ ಅದೇಕೆ ? ಈ ಮೊದಲು ನೀವು ಅದೆಷ್ಟೋ ಚಿತ್ರ ಬರೆದಿಲ್ಲವೇ? ಅವೆಲ್ಲ ಹೆಣ್ಣಾಗಲಿಲ್ಲ. ? ’

“ ಅವು ಬರಿ ಚಿತ್ರ, ಇದು ಶುದ್ಧಿ ಚಿತ್ರ, ನಾಗಾ ”

‘ ಸರಿಹೋಯ್ತು, ಈ ಬಂಗಾಲೀ ಚಿತ್ರಕ್ಕೆ ಈ ಗೌಡಬಂಗಾಲೀ

ವಿಮರ್ಶೆ ಹೊಂದಿಕೆಯಾಗುತ್ತದೆ '

" ನನಗೂ ಬಂಗಾಲೀ ಚಿತ್ರಗಳು ಸರಿ ಬರುತ್ತಿದ್ದಿಲ್ಲ. ಆದರೆ ಈ ಸೃಷ್ಟಿಗೆ ಈ ರೀತಿಯೇ ಒಪ್ಪು ! "

" ಹಾಗಾದರೆ ಇದೂ ವಿಶ್ವಾಮಿತ್ರನ ಹಾಗೆ ಪ್ರತಿಸೃಷ್ಟಿಯೇನು? ಬ್ರಹ್ಮಪಟ್ಟಕ್ಕೆ ನೀವೂ ಪ್ರತಿಸ್ಪರ್ಧಿಗಳಾದಿರಲ್ಲ ! "

" ನಾಗಾ, ನಿನ್ನಂಥ ಸರಸ್ವತಿ ಸ್ಫೂರ್ತಿ ಕೊಟ್ಟೂ ನಾನು ಬ್ರಹ್ಮಪದವಿಗೆ ತಡವಾಗಿ ಬಂದುದೇ ಆಶ್ಚರ್ಯ "

" ಬ್ರಹ್ಮ ಜಡಬುದ್ಧಿ ಎಂದು ಹೇಳುವರು, ಆದರೆ ನಿಮ್ಮೀ ಮಾನಸಪುತ್ರಿ ನಿಮ್ಮ ಸರಸ್ವತಿಗೇ ಮಂಕು ಹಿಡಿಸಿದ್ದಾಳೆ ! "

' ಅದೇಕೆ, ನೀನು ಮಾಡಿದ ವಿಮರ್ಶೆಯಲ್ಲಿ ಒಂದಿಷ್ಟೂ ತಪ್ಪಿಲ್ಲ ವಲ್ಲ. ನೀನಾಡಿದುದು ಒಂದೊಂದೂ ನಿಜ '

" ಇದೇನು ಅಪೂರ್ವಭೂತ ! ಎಂದು ಚಿತ್ರಕ್ಕೆಂದರೆ ನೀವು ಅದನ್ನು ಗುಣಗ್ರಹಣವೆಂದು ಹೇಳುವಿರಲ್ಲ ? "

' ಹೌದು, ಎಲ್ಲಿಯೋ ಅಸಹ್ಯಪಟ್ಟುಕೊಂಡು ಒಂದಿಷ್ಟು ಅಡಕಿನಿಂದ ಮಾತುಗಳನ್ನು ವಕ್ರೋಕ್ತಿಗಿಳಿಸಿದರೂ ಭಾವಕ್ಕೆ ಬಾಧೆಯಿದೆಯೇ ? '

' ಅದೇನೋ ! ವಕ್ರೋಕ್ತಿ ಗಿಕ್ರೋಕ್ತಿ ನಾನರಿಯೆ ; ಈ ದಿಗಂಬರ ನಾರಿಯನ್ನು ಒಣ್ಣದಲ್ಲಿ ಬರೆದುಕೊಂಡು ಕಣ್ತೀಟೆ ತೀರಿಸಿ ಕೊಳ್ಳುವದು ಅದಾವ ರುಚಿಯೋ ? "

' ನಾಗಾ, ಇದೂ ವರೆಗೆ ಅತ್ತ ಇತ್ತ ಹೆಡೆಯಾಡಿಸಿ, ಈಗ ಫೂತ್ಕಾರಕ್ಕೆ ಪ್ರಾರಂಭವಾಯಿತೇ ? '

' ಮೆತ್ತಗೆ ಹೇಳಿದಷ್ಟಕ್ಕೆ ಪದ್ಯ ಎಂದು ತಿಳಿದುಕೊಂಡರೆ, ಏನು ಮಾಡುವದು ? ಭಾವವನ್ನು ಗದ್ಯದ ಹದಕ್ಕೆ ಇಳಿಸಬೇಕಾಗುತ್ತದೆ.'

' ಹದ ಮೀರದ ವರೆಗೆ ನನಗೆ ಯಾವ ಅಡ್ಡಿಯೂ ಇಲ್ಲ. ನೀನೇ ಹೇಳಿದೆ, ಮಾನುಷ್ಯವಲ್ಲ, ದೇವತೆಯಲ್ಲ, ಚಿತ್ರವಾಗಿರುವ ಮಾನಸಪುತ್ರಿ ಎಂದು. ಈಗ ಒಮ್ಮೆಲೆ ಹೊಂಚಿನಿಂದ ಹೊರಬಿದ್ದು

ಈ ಚಿತ್ರವನ್ನು ಸುಳ್ಳೇ ಸವತಿಯಂತೆ ಕಾಣುವೆ !'

" ನಾನು ಚಿತ್ರಕ್ಕೆ ಸವತಿಯೆಂದು ತಿಳಿದುಕೊಳ್ಳಬೇಕಾದರೆ, ನಾನೇ ಚಿತ್ರದಂತೆ ಸಪ್ಪೆಯಾದ ಹೆಣ್ಣಾಗಿರಬೇಕು " ಎಂದು ಆಕೆ ಹೆಗಲಮೇಲಿನ ಕೈ ಎತ್ತಿ ಹಿಂದೆ ಸರಿದಳು.

' ಯಾಕೆ ಕೈ ತೆಗೆದುಕೊಂಡೆ ? " ಎನ್ನುತ್ತ ಪದ್ಮನು ಮೊಗವನ್ನು ಹಿಂದುರುಗಿಸಿದನು.

ಪದ್ಮನ ಮನದಲ್ಲಿ ಚಿತ್ರಸೃಷ್ಟಿಯು ಅಸ್ತವಾಗಿತ್ತು ತನ್ನ ಕಡೆಗೆ ಕಣ್ಣರುಹಿದನಲ್ಲ ಎಂಬ ಸಂತೋಷವನ್ನು ಹಾಗೆಯೇ ಒತ್ತಿಕ್ಕಿ "ಸರಿ, ಕೈಯಿಟ್ಟ ಅರಿವಿದ್ದಿಲ್ಲವಾದರೂ ಕೈ ಹಿಂದೆಗೆದ ಅರಿವಾಯಿತು ಸ್ಪರ್ಶಶಕ್ತಿಯು ನತ್ತಿಲ್ಲ - ಬದುಕಿದೆ " ಎಂದಳು ನಾಗಶ್ರೀ

" ಹೀಗೋ, ಇದಕ್ಕೆ ಸವತಿಮತ್ಸರ ಎನ್ನುವದು " ಎಂದು ಪದ್ಮನು ಕಟಕಿಸಿದನು.

" ಇದಕ್ಕೆ ಹೆಣ್ಣಿನ ಹುಚ್ಚು ಎನ್ನುತ್ತಾರೆ — "

" ಮತ್ಸರವು ಹೆಣ್ಣಿನ ಹುಚ್ಚೇ ಸರಿ "

" ನಾನೆನ್ನುವದನ್ನು ಪೂರ್ಣ ಕೇಳಿಕೊಳ್ಳಿರಿ, ಶಬ್ದಕ್ಕೆ ಜೋತು ಬಿದ್ದು ಅರ್ಥ ಮರೆಮಾಚಬೇಡಿರಿ. "

" ನಿನ್ನ ಮಾತಿನಲ್ಲಿ ಅರ್ಥ ಬೇರೆ ಇದೆಯೇ ? ನಿನ್ನ ವಾಗಾಡಂಬರದ ವಿಲಾಸದಲ್ಲಿ ನನಗೆ ಅದು ತೋಚಲೇ ಇಲ್ಲ ! ಹಾಗಾದರೆ ಬರಲಿ ತಮ್ಮ ಪೂರ್ಣವಾಕ್ಯ. "

" ಗಂಡಸಿಗೆ ಹಿಡಿದ ಹೆಣ್ಣಿನ ಹುಚ್ಚು..... ಅನ್ನತಾ ಇದ್ದೆ. "

" ಈಗ ತಿಳಿಯಿತು "

" ತಮಗೆ ಅಷ್ಟು ತಿಳಿದರೆ ಸಾಕು, ನಾನು ಗೆದ್ದೆ. " ನಾಗಶ್ರೀ ಉಬ್ಬಿನಿಂದೆಂದಳು.

" ಗೆಲವು ಅಷ್ಟು ಸುಲಭವಲ್ಲ, ಬಾ ಇತ್ತ " ಹೀಗೆನ್ನುತ್ತ ಪದ್ಮನು ಎದ್ದು ಎರಡು ಹೆಜ್ಜೆ ಬಂದು, ನಾಗಶ್ರೀಯನ್ನು ಕೈ ಹಿಡಿದು, ತನ್ನ ಹತ್ತಿರದ ಖುರ್ಚಿಯಲ್ಲಿ ಕುಳ್ಳಿರಿಸಿದನು. " ನಮಗೆ — ಚಿತ್ರ

ಕಾರರಿಗೆ ರೂಪದ ಅರ್ಥವಾಗುವಷ್ಟು, ಶಬ್ದದ ಅರ್ಥವಾಗುವದಿಲ್ಲ. ಕೆಳದುಟಿ ಕಚ್ಚಿ ಕಚ್ಚಿ ನೀನು ಮಾತಾಡುವದರಿಂದ ಏನೋ ಸಿಡುಕು ಇದೆ ಎಂದು ತೋರುವದು, ಅಷ್ಟೇ. ಹೇಳು ನೋಡೋಣ ಇನ್ನು ನಿನ್ನ ಆ ಗಂಡಸಿಗೆ ಹಿಡಿದ ಹೆಣ್ಣಿನ ಹುಚ್ಚಿನ ಅರ್ಥ ? ”

“ ಬಿಚ್ಚಿ ಹೇಳಿದರೂ, ಮುಚ್ಚಿ ಇದೆ, ಎಂದು ತಿಳಿದುಕೊಳ್ಳುವವರಿಗೆ ಮಾಡುವದೇನು ? ’

‘, ಇನ್ನಿಷ್ಟು ತೀರಾ ಸುಲಿದು ಹೇಳುವದು. ”

“ ನಿದ್ದೆಹೋದವರನ್ನು ಎಬ್ಬಿಸಬಹುದು, ಬೇಕೆಂದೇ ಕಣ್ಣು ದವರಿಗೆ . . . ? ”

“ ಅಯ್ಯೋ ನಾಗಾ ! ಹೇಳುವದನ್ನು ಬಿಚ್ಚಾಗಿ ಹೇಳು — ನಾನು ಬರೆದ ಈ ಚಿತ್ರದಂತೆ ನಿನ್ನ ಮನದ ಗಾಳಿಗೆ ಮೊಳವುದ್ದ ಮಾತಿನ ಉಡಿಗೆ ಉಡಿಸಬೇಕು. ”

‘ನಿಮಗೆ ಯಾವಾಗಲೂ ಆ ರೀತಿಯೇ ಒಪ್ಪಿಂದು ತೋರುತ್ತದೆ ’

“ ನಿಜ ತಿಳಿಯಬೇಕಾದರೆ ಇದೇ ಬೇಕು ಹುಂ, ಹೇಳು ? ”

“ ಈ ಬತ್ತಲೆ ಚಿತ್ರಕ್ಕೂ ಗುಡಿಯ ಹಾದಿಯ ಮೇಲಿನ ಎಲೆಯಡಿಕೆ ಅಂಗಡಿಗಳಲ್ಲಿ ತೂಗು ಹಾಕಿದ ಆ ವಿಲಾಯತಿ ಸೀಮೆ ಚಿತ್ರಗಳಿಗೂ ಏನು ಭೇದ ? ”

“ ಆ ಎಲೆ–ಅಡಿಕೆ ಅಂಗಡಿಗೂ— ಈ ಕೋಣೆಗೂ ಇರುವಷ್ಟು! ”

“ ಈಗ ನೋಡಿದಿರಾ, ನಿಮ್ಮ ಬಾಯಿಂದ ಕಾವ್ಯ ಬರತೊಡಗಿತು. ”

“ ಸಹವಾಸಕ್ಕೆ ಅಷ್ಟೂ ಫಲ ಬೇಡವೇ ? ಈಗೋ ನೋಡು, ಈ ಚಿತ್ರ ಅಂಥ ಅಂಗಡಿಗಳಲ್ಲ ತೂಗು ಹಾಕಿದರೆ, ಇದರ ಮೇಲಿನ ಧೂಳು ಒರೆಸಲಿಕ್ಕೆಂದು ಕೂಡ ಯಾರೂ ಇದಕ್ಕೆ ಕೈ ಹಚ್ಚಲಿಕ್ಕಿಲ್ಲ. ”

“ಅದೇನೋ ನಿಜ, ಆ ಚಿತ್ರಗಳ ಬದಿಗೆ ಇದೊಂದಿಷ್ಟು ಒರಟು.”

“ ಆ ಚಿತ್ರಗಳಿಗೇ ನಯ ಹೆಚ್ಚಾಗಿಬಿಟ್ಟಿತೇ ನಿನ್ನ ಕಣ್ಣಲ್ಲಿ? ”

“ ಈಗ ನಾವು ಚರ್ಚಿಸುತ್ತಿರುವದು ನಿಮ್ಮ ಕಣ್ಣಿನ ವಿಷಯ;

ಅಂಥ ಚಿತ್ರ ಬರೆಯಲಿಕ್ಕೆ ಈ ಅಭ್ಯಾಸ ನಡೆದಿರಬೇಕು" ನಾಗಶ್ರೀ ತಿವಿದಾಡಿದಳು. ಪದ್ಮನ ಚಿತ್ತವು ಕೆಣಕಿದಂತಾಯಿತು ಆದರೂ ಅವನು ಸಮತೆಯನ್ನು ಕಳೆದುಕೊಳ್ಳದೇ ಹೇಳಿದ— "ಕನಸಿನ ಕನವರಿಕೆಗೂ ಅರ್ಥ ಹೇಳಬಹುದು. ಅರೆನಿದ್ದೆಯೊಳಗಿನ ಒರಲಾಟಕ್ಕೆ ಅರ್ಥವಿಲ್ಲ ನಡೆ ನಿದ್ದೆ ಮಾಡೋಣ" ಹೀಗೆಂದು ಎದ್ದ

"ನನಗೆ ನಿದ್ದೆ ಬರದು. ನೀವೋ ನಿದ್ದೆಗೆಟ್ಟು ಏನೋ ಬರೆದಿದ್ದೀರಿ ನಿದ್ದೆಯಲ್ಲಿದ್ದವರಂತೆ ಏನೇನೋ ಹೇಳುತ್ತಿದ್ದೀರಿ ನೀವು ನಿದ್ದೆ ಮಾಡಿರಿ ಆದರೆ ಪುಣ್ಯಕ್ಕೆ ಈ ಮನಸಿನ ಪಾಡದಿ ಕನಸಿನ ಕೆಳದಿಯಾಗಿ ಕುಣಿದಾಡದಿರಲಿ."

"ನಿನಗೆ ಅದೊಂದೆ ಹುಚ್ಚು ಈ ಚಿತ್ರ–ನಾರಿಯು, ಮನಸಿನ ಮೂರ್ತಿಯಾಗುವ ಮೊದಲು ಕನಸಿನ ಕನ್ನಿಕೆಯಾಗಿಯೇ ಬಂದಿದ್ದಳು ನಾನೋ ಬೇನೆಯಿಂದ ಬಳಲಿದವರು ಪಡೆದು ವಿಶ್ರಮಿಸುವಂತೆ ಸುಖವಾಗಿ ನಿದ್ರೆ ಹೋಗುವೆ, ನೀನು ಮಾತ್ರ ಎಚ್ಚರಗೆಟ್ಟು ಕಾದಂಬರಿಯನ್ನು ಕಟ್ಟಬೇಡ, ಆಯಿತು"

"ಕಾದಂಬರಿಯನ್ನು ಕಟ್ಟುವೆನೋ ಕೆಡಹುವೆನೋ ಗೊತ್ತಿಲ್ಲ ಆದರೂ ಗಂಡಸರ ಈ ಅಡ್ಡರುಚಿಯು ಅರ್ಥಮಾಡಿಕೊಳ್ಳದೇ ನನಗೆ ನಿದ್ದೆಯಿಲ್ಲ"

"ನಿದ್ದೆ ಮಾಡು, ಹುಚ್ಚೆಳೆಯುವದು ಎನ್ನುವವ ನಿದ್ದೆ ಆದರೆ ಹುಚ್ಚೆಳೆಯದೆ, ನಿದ್ದೆ ಮಾಡಲಾರೆ, ಎನ್ನುವಂತಿದೆ ನಿನ್ನ ರೀತಿ ನಿನ್ನದೆ ಆಗಲಿ. ಈ ಚಿತ್ರದ ಹೆಣ್ಣು ಬತ್ತಲ ಇರುವದೇ ನಿನ್ನ ರೋಷಕ್ಕೆ ಕಾರಣವಷ್ಟೇ?"

"ಈ ಮೊದಲು ಎಷ್ಟು ಚಿತ್ರಗಳಲ್ಲಿ ಹಾಗಿರಲಿಲ್ಲ? ಅಲ್ಲಿ ರೋಷವೂ ಇಲ್ಲ. ತಾವು ಬರದದ್ದೇಕೆ ಎಂಬುದೇ ನನಗೆ ಅಸಮಾಧಾನ" ಎಂದು ದಿಟ್ಟಿಸಿ ಹೇಳಿದಳು ನಾಗಶ್ರೀ

"ಅಂತೂ 'ಕಾಣದ ವಸ್ತುವ ಕಾಣಬೇಕೆಂಬಾಸೆ" ನನಗೆ ಕೈ ಹಾಕಿಸಿತೆನ್ನು ಈ ಕೆಲಸಕ್ಕೆ!" ನಗುತ್ತ ಪದ್ಮನೆಂದ.

ನಾಗಶ್ರೀಗೆ ನಾಚಿಕೆಯೆನಿಸಿದಂತಾಯ್ತು. ಆದರೂ ವಾದಿಯ

ಆವೇಶದಲ್ಲಿ ಅದನ್ನೋಡಿಸಿ " ಸಭ್ಯಗೃಹಸ್ಥರ ಕೃತ್ರಿಮ ತೃಪ್ತಿಯ ಕಲಾ ಮಾರ್ಗವಿರಬೇಕು ಇದು ರವಿವರ್ಮನ ಚಿತ್ರನೋಡಿ ಎಷ್ಟೋ ಸಲ ಎನಿಸಿದೆ ನನಗೆ ಹೀಗೆ. " ಎಂದಳು

" ನಾಗಶ್ರೀ, ರವಿವರ್ಮನ ವಕಾಲತ್ತನ್ನು ನಾನು ವಹಿಸ ಲಾರೆ ಅವನ ರಹಸ್ಯ ಅವನಿಗೆ ಗೊತ್ತು. ಸದ್ಯಕ್ಕೆ ನನ್ನ ಹೃದಯ ಹೇಳುತ್ತೇನೆ ಮೊದಲು ಹೇಳಿದಂತೆ ಈ ಚಿತ್ರ ನಾನು ಕಂಡಿದ್ದು ಕನಸಿನಲ್ಲಿ, ಆ ಮೇಲೆ ರೂಪಿಸಿದ್ದು ಮನದಲ್ಲಿ, ಮೂಡಿಸಿದು ಬಣ್ಣದಲ್ಲಿ "

"ಅಂತೂ ಸ್ವರ್ಗ ಅಂತರಿಕ್ಷ ದಾಟಿ ಮೂರನೆ ಮೃತ್ಯು ಲೋಕಕ್ಕೆ ಬಂದಿತು ! "

" ಅನ್ನು, ಹಾಗೆ ಬೇಕಾದರೆ ಆದರೆ ಕಲೆಯ ಸೀಮೆಯು ಲೋಕವೋ ಅಲೋಕವೋ ಹೇಳಲಾರೆ. "

" ಚಿತ್ರವಾದರೇನಾಯಿತು ? ದೇಶದಂತೆ ವೇಷ ಬೇಡವೆ ? "

" ನಾಗಾ, ಈ ಚಿತ್ರ ಕಣ್ಮುಚ್ಚಿ ನೋಡಬೇಕು .'

" ನೋಡುವ ಮೊದಲಾದರೂ ಕಷ್ಟರದಿರಬೇಕಲ್ಲವೇ ? "

" ಹೌದು, ಆದರೆ ಹಾಗೆ ಮಾಡಿದ ಮೇಲೆ ಕಣ್ಣು ಒಳಗೆ ಹೊರಳದಿದ್ದರೆ ಈ ಚಿತ್ರದ ಬಾಳು ಸಾರ್ಥಕವಲ್ಲ ಆದರೂ ನೋಡು ವವರಲ್ಲಿಯೂ ಸ್ವಲ್ಪ ರೀತಿ ಬೇಕು. ಮುಗ್ಧ ಹಸುಳೆಯರನ್ನು ಬತ್ತಲೆ ಕಂಡು ಚಲಿತರಾದ ಚಂಚಲರುಂಟು; ಕಲ್ಲುಬೊಂಬೆಗಳಿಗೆ ತೆಕ್ಕೆ ಬೀಳುವ ಮೂಢರುಂಟು, ಜಿನ ಬಿಂಬುಗಳನ್ನು ನೋಡಿ ಮೂಗು ಮುರಿಯುವ ಅತಿಸಭ್ಯಜನರೂ ಇದ್ದಾರೆ. ಆದರೆ ಅದನ್ನು ನಿರ್ಮಿ ಸುವವರ ಮನೋವೃತ್ತಿಯನ್ನು ನಾವು ಲೆಕ್ಕಿಸಬೇಕು, ನಾಗಾ ! "

" ಹೇಳೋಣವಾಗಲಿ, ಅದೇನೆಂಬುದು ? "

" ಅವರು ಜೀವನದಲ್ಲಿ ಸ್ತ್ರೀಲೋಲುಪರೇ ? ಚಿತ್ರಲೇಖನ ಲಾಲಸೆಯಲ್ಲಿಯೂ, ಅದನ್ನು ನಿರ್ವರ್ಣಿಸುವಾಗಲೂ, ಅವರು ಸ್ಥಿರರಿರು ವರೇ, ಅಸ್ಥಿರರಾಗುವರೇ ? ಇದನ್ನೂ ನಾವು ಯೋಚಿಸಬೇಕು. "

" ಆಯಿತೇ ? "

" ಇದಲ್ಲದೆ, ಆ ಚಿತ್ರದಲ್ಲಿ ಪರಿಕರರೂಪವಾಗಿರುವ, ಉದ್ದೀಪಕ ಸಾಮಗ್ರಿ ಏನಿದೆ ಎಂಬುದನ್ನೂ ಲಕ್ಷಿಸಬೇಕು. ಒಡ್ಡರ ತಿಮ್ಮಿಯ ಬರಿಯೆದೆಗಿಂತ ಸೆರಗು ಸರಿದಾಡಿಸುವ ಸೋಗಲಾಡಿಯರ ಒಯ್ಯಾರದ ಉದ್ದೀಪನವು, ಬೇರೆ ಜಾತಿಯದಲ್ಲವೇ ? "

" ಬಲ್ಲವರಿಗೆ ಬೇರೆ ಏನು ಹೇಳಬೇಕು ? " ನಾಗಶ್ರೀ ಕಾಕು ದನಿಯಿಂದ ಸ್ವರ ಎಳೆದಳು.

" ಹೌದು, ಚಿತ್ರಶಿಲ್ಪಿಗೂ, ಎಲ್ಲ ಕಲಾ–ಬ್ರಹ್ಮರಂತೆ, ಸೃಷ್ಟಿ-ಕರ್ಮ ಜಾಲವೆಲ್ಲವೂ, ಸಾಕ್ಷಾತ್ತು ಇರಬೇಕಾಗುವದು. ಚಿತ್ರಕನು ಸಾಕ್ಷಿ ಮಾತ್ರ. "

" ಅದೆಲ್ಲವೂ ಸರಿಯೇ ! ಆದರೆ, ಆ ಅಪಾರ ಸೃಷ್ಟಿಯೊಳಗಿಂದ ಒಂದು ರೂಪವನ್ನು ಆಯ್ದೆತ್ತುವದರಲ್ಲಿ, ಶಿಲ್ಪಿಯ ಸಾಕ್ಷಿತ್ವವು ಮುಳುಗಿ, ಅವನ ವ್ಯಕ್ತಿತ್ವದ ರುಚಿಯೇ ಮೂಡಿ ಎದ್ದುಕಾಣುವದಿಲ್ಲವೇ ? "

" ಅವನ ವ್ಯಕ್ತಿತ್ವ ಮೂಡಿದರೆ, ಅವನ ಸಾಕ್ಷಿತ್ವವೇಕೆ ಮುಳುಗಬೇಕು ? ಸಾಕ್ಷಿತ್ವವುಳಿದೂ ವ್ಯಕ್ತಿತ್ವ ಬೆಳಗದೇ ? "

" ನಿಮ್ಮ ಸಾಕ್ಷಿತ್ವ ನಿಮಗಿರಲಿ ! ಅದಲ್ಲ ನನ್ನ ಪ್ರಶ್ನೆ. ಆದರೆ ಈ ಚಿತ್ರದಿಂದ ಧ್ವನಿತವಾಗುವ ನಿಮ್ಮ ವ್ಯಕ್ತಿತ್ವದ ವ್ಯಂಗಾರ್ಥವಾದರೂ ಏನು ? "

" ಈ ಚಿತ್ರದ ವಾಚ್ಯಾರ್ಥವನ್ನಾದರೂ ಅವಯವಗಳನ್ನು ಅನ್ವಯಿಸಿ ತಿಳಿದುಕೊಂಡೆಯಾ ? ಚಿತ್ರವನ್ನು ಇನ್ನೊಮ್ಮೆ ನಿಟ್ಟಿಸಿ ನೋಡು "

ನಾಗಶ್ರೀಯು ಚಿತ್ರದತ್ತ ನೋಡಿದಳು. ಪದ್ಮನು ನಾಗಶ್ರೀಯತ್ತ ನೋಡಿದನು. ನಾಗಶ್ರೀಯ ನಿದ್ದೆಗಣ್ಣು ಈಗ ನಿಚ್ಚಳವಾಗಿದ್ದವು. ಚಿತ್ತದ ಮನೆದಾಟದಿಂದೆದ್ದ ಬುದ್ಧಿಯ ಶಿಖೆಯು ಭಾವಶಾಬಲ್ಯದ ಹೊಗೆಯನ್ನು ಹೊಡೆದು ಹಾಕಿ ಕಣ್ಗೊಂಬೆಯಲ್ಲಿ ಪ್ರಭೆಯಾಗಿ

ಪ್ರಜ್ವಲಿಸುತ್ತಿತ್ತು. ಆ ಬೆಳಕಿನಲ್ಲಿ ಚಿತ್ರವನ್ನು ನಾಗಶ್ರೀ ನೋಡಿದಳು ಅದೇ ಚಿತ್ರ! ಈಗ ಕಂಡಿದುದು ಮಾತ್ರ ವಿಚಿತ್ರ! ಮನದ ಮೋಡಗಳನ್ನು ಮರ್ದಿಸಿ ಎದ್ದ, ಚಿತ್ತದ ತಟಿಲ್ಲತೆಯು ರೂಪವೆತ್ತು ಕೋಂಕಾಗಿಯೂ ಬಿಂಕವಿಲ್ಲದೆ ನಿಂತಂತೆ, ಮೂಡಿದ ಆ ಮೂರ್ತಿಗೆ ನಾಗಶ್ರೀಯು ಮನಸೋತಳು ಮಿಶ್ರವರ್ಣದ ಮುಸಕು ಮಬ್ಬಾದ ಹಿನ್ನಲೆಯಲ್ಲಿ, ಹೀರಕದ್ಯುತಿಯೆ ಥಾಳಿಸುತ್ತ ನಿಂತ ಹಾಗಿರುವ ಆ ರೂಪು, ರೂಢಿಯ ಸಂತೆಯನ್ನು ದಾಟಿದ ಅಲೌಕಿಕ ಆಟದಂತೆ, ನಾಗಶ್ರೀಯ ಎಚ್ಚರದ ಕಣ್ಣಿಗೆ ಮೋಹನ ಚೂರ್ಣವನ್ನೆರಚಿತು. ಪಟದೊಳಗಿನ ಗೊಂಬೆ ಹಾಗ ಎದ್ದು, ಮುಂದೆ ಮುಂದೆ ಅಂತರಿಕ್ಷದಲ್ಲಿ ತೇಲಿ, ಕಣ್ಬೊಲದಲ್ಲಿ ಸೇರಿ, ಮನದ ಮಡುವನ್ನು ಧುಮುಕಿತು ಕವಿದ ಕತ್ತಲೊಳಗಿಂದ ಕೋಲ್ಮಿಂಚಿನಂತೆ ಝಗ್ಗನೆ ಮೂಡಿ ಚಿತ್ತದಲ್ಲಿ ಮುದ್ರಿಸಿದಂತೆ, ತಾಯಮಡಲ ಮಗುವಿನಂತೆ, ನೋಡುವವರನ್ನೆ ನುಂಗುಲು ನೆನೆವಂತೆ ತೋರಿತು. ನಾಗಶ್ರೀಗೆ ತನ್ನ ಮೈಯ ಬಟ್ಟೆ ಕಳಚಿ, ತೊಗಲ ಪೊರೆ ಉಚ್ಚಿ, ಮನದ ಮಾಸ ಸುಲಿದು, ಸತ್ವದ ಸುಳಿ ಬಿಚ್ಚಿ, ತೇಜದ ಹೊರಳಿಯೊಳಗಿಂದ ಉರುಳಿ ಬಂದ ತನ್ನ ಜೀವ–ಜೀವಾಳದ ನಿರಂಜನ ಪ್ರಕೃತಿಯೆ ಆಕಾರ ತಾಳಿದಂತೆ ಹೊಳೆದಾಗ ಅವಳು ಸ್ತಂಭಿತಳಾದಳು ಕಣ್ಣಲ್ಲಿ ನೀರು ದುರಿತು. ಮೈ ಮುಳ್ಳಿಟ್ಟಿತು

ಪದ್ಮನು ನಾಗಶ್ರೀಯ ಬಳಿಗೆ ಬಂದು 'ನಾಗಾ, ಏನು ಗರುಡನ ಗೆರೆ ಕಂಡೆಯೋ? ಏನು ಎಚ್ಚರದ ನಿದ್ರೆ ಕವಿದಿತೇ?" ಎಂದು ತಲೆಯ ಕೂದಲು ಸವರಿದ, ಬೆನ್ನು ತಡವಿದ, ಕುರುಳು ಸರಿಮಾಡಿದ, ಗದ್ದ ಅಲುಗಿದ.

ನಾಗಶ್ರೀಯು ತನ್ನನ್ನೆ ತಾನು ಹುಡುಕಿ ಅರಿತುಕೊಂಡವರಂತೆ ಕಣ್ಣು ಅರಳಿಸಿದಳು; ಮೆಲ್ಲಗೆ ಎದ್ದಳು, ಚಿತ್ರಪಟವನ್ನು ಎತ್ತಿ ಮುದ್ದಿಟ್ಟಳು, ಕಣ್ಣಿಗೊತ್ತಿ, ಎದೆಗಪ್ಪಿಕೊಂಡು 'ಪದ್ಮ' ಇದು ಆಟದ ಚಿತ್ರವಲ್ಲ. ಮಾಡದ ಗೊಂಬೆ" ಎಂದಳು.

‘ ಹೌದು , ಇದೆ ಆ ಗೊಂಬೆಯ ವ್ಯಂಗಾರ್ಥ, ನನ್ನ ಸರಸ್ವತಿ, ನಿನ್ನ ಹರಕೆ ನನಗೆ ಸಾವಿರ ಬಿರುದಿಗೂ ಮೇಲು,” ಎಂದ ಪದ್ಮ

“ ಗೊಂಬೆಯನ್ನು ಕಲ್ಪಿಸಿದ್ದು ಹೇಗೆ ? ’ ಎಂದು ಗೋಣು ಮಾಡಿ ನಾಗಶ್ರೀ ಕೇಳಿದಳು

“ ನಾನು ಕಲ್ಪಿಸಲಿಲ್ಲ. ಅದೇ ನನ್ನನ್ನು ನೂರು ಕನಸುಗಳಲ್ಲಿ ಬೆನ್ನಟ್ಟಿಬಂದಿತು ಎಚ್ಚರದ ತೋಟಿಗೆ ಸಿಕ್ಕದೆ ಜಾರುತ್ತಿದ್ದಿತು. ಇಂದು ಎಚ್ಚರಿರುವಾಗಲೇ ಕಣ್ತುಂಬಿ, ಬಾನ ತುಂಬಿ ನಿಂತಿತು ಹಾಗೆಯೇ ಬರೆದೆ. ”

“ ಯಾವದೋ ಜಿನಯೋಗಿಯ ಆತ್ಮಬಿಂಬದಂತಿಲ್ಲವೆ ಈ ಗೊಂಬಿ ? ”

“ ಏನೋ. ”

“ ಇದಕ್ಕೆ ಹೆಸರೇನು ? ”

“ ಮಲ್ಲಿ, ಅದು ತಾನೆ ತನ್ನ ಹೆಸರನ್ನು ಕನಸಿನಲ್ಲಿ ಹೇಳಿತ್ತೊಮ್ಮೆ ! ”

“ ತಂತನದ ತನುವ ಕಂಡವರು ಯಾರಿಲ್ಲಿ ?
ಎಂತೊ ಮುಮುತೆಯೆ ಮಲರಿ ಆಯ್ತು — ಮಲ್ಲಿ ”

ನಾಗಶ್ರೀ ಹಾಡಿದಳು. ಪದ್ಮ ಎಳೆನಗೆ ಬೀರಿದ. ಉಷಃ ಕಾಲವಾಯಿತು.



# ಮಗುವಿನ ಕರೆ

‡ § § § § § ‡

ಮಟಮಟ ಮಧ್ಯಾಹ್ನ. ಅಂಥ ಬಿಸಿಲಿನಲ್ಲಿ ಆ ಹಳ್ಳಿಯಲ್ಲಿ ಕೂಡ ಯಾರೂ ಮನೆಯಿಂದ ಹೊರಬೀಳಲಾರರು. ಆದರೆ ಶಾಸ್ತ್ರಿಗಳ ಸೊಸೆಯು ಮಧ್ಯಾಹ್ನ ಕುಡಿಯುವ ನೀರು ತರಲು ಊರ ಹೊರಗಿನ ಭಾವಿಗೆ ಹೊರಟಳು. ಏನು ದಿವ್ಯ ಮಾಡಿದಳು? ಎಂದು ಯಾರಾದರೂ ಕೇಳಬಹುದು ಭಾವಿಯಿಂದ ಹಳ್ಳಿಯ ಕೊನೆಯ ಮನೆ ಅರ್ಧಮೈಲು ದೂರವಿತ್ತು. ಆಲದ ಹಾಗೂ ಹುಣಿಸೆಯ ಎರಡು ದೆವ್ವದಂತ ಮರಗಳ ಹೊರತು ಆ ಭಾವಿಯ ಸಮೀಪಕ್ಕೆ ಬೇರೆ ಉಲಿವು ಯಾವುದೂ ಇರಲಿಲ್ಲ. ಹಳೆಯ ಕೋಟೆಯ ಹಾಳು ಕಂದಕದೊಳಗಿಂದ ಹೊರಬೀಳುವ ಕಾಡುಮಿಕಗಳು ಹಳ್ಳಕ್ಕೆ ನೀರು ಕುಡಿಯಲು ಹೊರಟಿದ್ದರೇನೋ! ಅವೇ ಸಪ್ಪು ಬಾವಿಯ ಬಳಿ ಕೇಳಿಸಬೇಕು. ಆದರೆ ಆ ಸಪ್ಪು ಎಂಥ ಸದ್ದು! ಹೆದರಿಸುವ ಸದ್ದು. ಮರಗಳ ನೆರೆಯಾದರೂ ಆ ಭಾವಿಯ ಭಯಾನಕತೆಯನ್ನೆ ಹೆಚ್ಚಿಸುತ್ತಿದ್ದವು. ಕುಡಿಯುವ ನೀರಿನ ಭಾವಿಯು ಆ ಊರಿಗೆ ಅದೊಂದೆ ಎಲ್ಲರಂತೆ ಶಾಸ್ತ್ರಿಗಳ ಮನೆಯವರೂ ಪ್ರಾತಃಕಾಲಕ್ಕೆ ತಮಗೆ ಬೇಕಾಗುವ ನೀರು–ನಿಡಿ ತಂದುಕೊಂಡಿದ್ದರು. ಆದರೆ ಮಡಿಯೊಳಗೆ ಇಟ್ಟ ಒಂದೇ ಒಂದು ಕೊಡವು ಶಾಸ್ತ್ರಿಗಳ ಮನೆಯ ಸಂಜೆಯ ಸಮಾರಾಧನೆಯಲ್ಲಿ ಉರುಳಿತು. ಅದರಿಂದ ಅಡುಗೆಯ

ಮನೆಯಲ್ಲಿಯೇ ಆದ ತೊಂದರೆ ತರಲಿ, ಶಾಸ್ತ್ರಿಗಳ ಸೊಸೆ ನೀರಿಗೆ ಹೊರಾಡಬೇಕಾಯಿತು.

ಶಾಸ್ತ್ರಿಗಳ ಮನೆಯ ತೊಂದರೆಯನ್ನು ಅದನ್ನು ನೋಡಿದರೆ ಅದನ್ನು ನೋಡಿದವರೆ ತಿಳಿಯಬಲ್ಲರು. ಪುರಾತನಕಾಲದಲ್ಲಿ ಬಹಳ ದೊಡ್ಡ ಮನೆಯಂತೆ. ಈಗ ಅಣ್ಣತಮ್ಮಂದಿರಲ್ಲಿ ನಿಜವಾಗಿಯೆ ನೂರಾರು ಪಾಲಾಗಿ ಅವರ ಪಾಲಿಗೆ ಎರಡುವರೆ ಗೇಣಿನ ತುಂಡೊಂದು ಬಂದಿತ್ತು. ಅಷ್ಟರಲ್ಲಿ ಅವರು, ಅವರ ಕುಟುಂಬ, ಹಿರಿಯಮಗ ಸೊಸೆ, ವಿಧವೆಯಾಗಿ ಮನೆಗೆ ಬಂದ ತರುಣ ಮಗಳೊಬ್ಬಳು, ಇಷ್ಟು ಜನರು ನ್ಯಾನದಿಂದ ಬದುಕು ಮಾಡುತ್ತಿದ್ದರು. ಶಾಸ್ತ್ರಿಗಳ ದುರ್ದೈವದಿಂದ ಅವರ ಹಿರಿಯ ಮಗನು ವ್ಯಾಧಿಯಿಂದಲೋ ಬಾಧೆಯಿಂದಲೋ ಮನೆಯ ಒಂದು ಭಾಗವನ್ನು ( ಇದ್ದ ಒಂದು ಆಡಕಲಕೋಣೆ ) ಹಿಡಿದು ನರಳುತಿದ್ದ. ಚಿಕ್ಕಿಲವ್ವೊಮ್ಮಗನು ಮೊನ್ನೆ ಮೊನ್ನೆ ಬಂದು ಅಡಿಗೆಮನೆಯ ಒಂದು ಭಾಗವನ್ನು ಕಟ್ಟಿಕೊಂಡಿದ್ದ. ಪಡಸಾಲೆಯೆಂಬ ಹೆಸರಿನ ಭಾಗವು ( ಆ ಮನೆಗೆ ನಡುಮನೆಯೇ ಇರಲಿಲ್ಲ. ) ಶಾಸ್ತ್ರಿಗಳ ಅಧ್ಯಯನ - ಅಧ್ಯಾಪನ - ಶಯನ ವಿಶ್ರಾಂತಿ ಇವೆಲ್ಲಕ್ಕೂ ಆಶ್ರಯವಾಗಿತ್ತು. ಮಡಿಯ ಸಾಮ್ರಾಜ್ಯವೆಲ್ಲ ಅಡಿಗೆಮನೆಯನ್ನು ಸೇರಿತ್ತು. ಅಲ್ಲಿಯೇ ಮೊಮ್ಮಗನು ಬಿಡಾರ ಬಿಟ್ಟಿದ್ದನು. ಅಡಿಗೆಯ ಒಲೆಯ ಉರಿಯನ್ನೆ ಧೂಪ - ದೀಪವೆಂದೂ, ಅದೇ ಅಡಿಗೆಯನ್ನೆ ನೈವೇದ್ಯ ಎಂದೂ ತೋರಿಸುವಷ್ಟು ಸಮೀಪ, ದೇವರ ಸಾನ್ನಿಧ್ಯವಿತ್ತು. ಮೀಸಲು ನೀರು ಈ ಸಂದಿಯಲ್ಲಿಯೇ ತನ್ನ ಪ್ರತ್ಯೇಕ ಪ್ರತಿಷ್ಠೆಯನ್ನು ಸಾರಿತ್ತು. ಶಾಸ್ತ್ರಿಗಳ ಸೊಸೆಯು ಮಡಿಯ ನುಸುಳಾಟದಲ್ಲಿ ಇಣಚಿಗಿಂತ ಹೆಚ್ಚಿನ ಚಪಲತೆಯನ್ನು ತೋರಿಸುತ್ತಿದ್ದಳು. ಆದರೂ ಅವಳ ಕಾಲು ತಾಕಿ ಕೊಡ ಉರುಳಿ, ಅಗ್ನಿ ದೇವರು ಶಾಂತರಾಗಿ, ದೇವರು ಜಲಸಮಾಧಿ ಹೊಂದಿದರು. ಪೂಜೆಯು ಆಗಿತ್ತು, ಅಡಿಗೆಯೂ ತೀರುತ್ತ ಬಂದಿತ್ತು. ಊಟಕ್ಕೆ ಕೂತಕಾಲಕ್ಕೆ ಹಳ್ಳಬಂದಂತೆ ಈ ಅನಾಹುತವಾಗಿ, ಶಾಸ್ತ್ರಿಗಳ ಮುಖದಲ್ಲಿ ಬೆಂಕಿಕಾಣದಿದ್ದರೂ ಹೊಗೆ ಮುಸುಕಿತು. ಅವರು ತಮ್ಮ

ಹೆಂಡತಿಯನ್ನೆ ಸಿಟ್ಟಿನ ಅಸಮಾಧಾನದಿಂದ ನೋಡಿದರು. ಶಾಸ್ತ್ರಿಗಳ ಪತ್ನಿ ಶಾಂತಸ್ವಭಾವದವರಾದರೂ "ಮಹಾರಾಯತೀ, ಏನು ಮಾಡಿಟ್ಟೀ! ಎಲ್ಲಿಯಾದರೂ ನೀರು ತಂದು ನಮ್ಮ ಇಲ್ಲಿಯ ಸೆರೆ ಬಿಡಿಸು. ಮುಂಜಾವಿನಿಂದ ಒಲೆ ಹಿಡಿದು ಕೂತಿದ್ದೇನೆ. ಹೋಗೆಯಾ ಯಾಗದೆ ಉರಿಯಾಗಬೇಕು. ಬಿಸಿ ಹತ್ತಿದ ಬೆಂಕಿ ಇರಬೇಕು. ಇಷ್ಟಾಗಿ ಎಲ್ಲರಿಗೂ ಬೇಗನೆ ಪ್ರಸಾದ ಸಿಗಬೇಕು. ನಾನಾದರೂ ಏನು ಸಾಯಲಿ!" ಎಂದು ತುಸು ರಂಭಾಟವನ್ನೆ ಮಾಡಿದರು. ಸೊಸೆ ‹ಪಿಟ್ಟನ್ನದೆ ಕೂಡಲೇ ಕೊಡ, ಹಗ್ಗ ತಕ್ಕೊಂಡು ನೀರಿಗೆ ಹೊರಟಳು

ನಾದಿನಿ ಅತ್ತಿಗೆಯ ಕೂಡ ಹೊರಡಲಿಲ್ಲ ಏನೋ ಮುಸು ಗುಟ್ಟಿದಳು. ಶಾಸ್ತ್ರಿಗಳ ಸೊನೆಗೆ ತಾನು ಚೊಚ್ಚಲ ಗಂಡು ಹಡೆದು ಬಂದ ಸುಖ ಇರಲಿ, ಹಡದದ್ದ ಮಹಾಪರಾಧವಾಗಿದೆಯೇನೋ ಎನಿ ಸಿತ್ತು ಅತ್ತೆಯ ಮನೆಗೆ ಬಂದಂದಿನಿಂದ, ಹುಡುಗನ ಕಾಲಗುಣ ಕೆಟ್ಟ ಎಂದು ಯಾರೋ ಅಂದಿದ್ದರು ಬೇರೆ. ಯಾಕಂದರೆ ಹುಡು ಗನ ತಂದೆಗೆ ಭ್ರಮೆ ಹಿಡಿದಂತಾಗಿತ್ತು ಎರಡು ತಿಂಗಳಿಂದ ಶಾಸ್ತ್ರಿ ಗಳ ಹೆಂಡತಿಗೆ ತಮ್ಮ ಮಗನ ಕಷ್ಟದಿದಿರು ಮೊಮ್ಮಗನ ಸುಖ ಮಸ ಕಾಗಿತ್ತು. ಬಡವರ ಸೊನೆಗೆ ನಾಲಿಗೆ ಸಡಿಲು ಬಿಡಬಲ್ಲವರೆಲ್ಲ ಅತ್ತೆ ಗಳೇ! ನೆರೆಮನೆಯ ಗುಬ್ಬೆಯೊಬ್ಬಳು 'ಅವಳಿಗೆ ಹುಚ್ಚಗಂಡ ಬೇಕಾಗಿದ್ದನೆನ್ಲಿ?" ಎಂದು ಇವಳ ಕಿವಿಗೆ ಬೀಳುವಂತೆ ಆಡಿ ದ್ದಳು. ಊರ ಅತ್ತೆಯೊಬ್ಬಳು "ಹುಡುಗನ ಮುಖ ಅತ್ತೆಯ ಮನೆಯವರಾರಂತೆಯೂ ಇಲ್ಲ. ಅಜ್ಜನು ತೆಯಿಲ್ಲ?" ಎಂದು ಪ್ರಕ ಟನೆ ಹೊರಡಿಸಿದ್ದಳು. ಹಾಳುಗುಡಿಯ ಒಕ್ಕಣ್ಣ ಪೂಜಾರಿಯೊಬ್ಬ ಈಕೆಯನ್ನು ಕಂಡಾಗ್ಗೆ ಪಿಸಿ ಪಿಸಿ ನಕ್ಕಿದ್ದ. ಯಾರಾರೋ ಎನೇ ನೋ ಅಂದಿದ್ದರು. ಮಟ ‹ಮಟಮಧ್ಯಾಹ್ನದಲ್ಲಿ ಮಸಣದ ನಾಲ್ಕು ಭೂತಗಳು ಕವಕ್ಕೆಂದು ಬಂದಂತೆ ಅವಳ ಜೀವ ಹೆದರಿಕೊಂಡಿತು. ನೆನೆಸಿದಂತೆ ರೋಸಿಗಿಟ್ಟಿತು. ತಾನು ಯಾರಿಗೆ ಬೇಕಾಗಿದ್ದೇನೆ?

ತನ್ನ ತಾಯಿಗೆ ? ಅಯ್ಯೋ ಪಾಪ, ಅವಳಿಗೆ ತಾನೊಂದು ಭಾರ. ಮದುವೆಯಾಗುವ ಮುಂಚೆ ಒಂದು ರೀತಿ, ಆದಮೇಲೆ ಇನ್ನೊಂದು ರೀತಿ. ತನ್ನ ತಾಯಿಗೆ ತಾನಲ್ಲದೆ ಯಾರಿದ್ದಾರೆ ? ಹೌದು, ಅಂತೆಯೇ ತಾನು ಭಾರ. ಸಂಸಾರ ಸುಖವಾಗಿ ಇದ್ದರೆ ಅದೆಲ್ಲ ಸರಿಯಿತ್ತು, ಈಗ ? ತಾನು ಅವಳೆಡೆಗೆ ಹುಣ್ಣು. ತನ್ನ ಗಂಡನಿಗೆ ತಾನು ಬೇಡಾಗಿರುವೆನೆ ? ಇಲ್ಲ. ಬೇಕಾಗಿರುವೆನೆ ? ಅದೂ ಇಲ್ಲ ಅವರಿಗೆ ಅವರ ಜೀವ ಸಾಕಾಗಿದೆ. ಕೂಸುಬಂದು ತಿಂಗಳಾಗಿ, ಅವರು ಅದರ ಹೆಸರನ್ನೆತ್ತಿಲ್ಲ ಕಣ್ಣೆತ್ತಿ ನೋಡಿರುವರೋ ಇಲ್ಲವೋ ಪಾಪ ! ಅವರೆಚ್ಚರ ಅವರಿಗಿಲ್ಲ ಹೌದು. ನಾನು ಹಂಗಸು ಊರವರೂ ಮನೆಯವರೂ ಕೂಡಿಯೇ ಹರಿದು ತಿಂದರೆ ನಾನೇನು ಮಾಡಬೇಕು ? ಅತ್ತೆ – ಮಾವಂದಿರಿಗೆ ನಾನಾರು ? ಮಗ ಬೇಕಾದರೆ ಜಗ ಬೇಕು. ತಾನಾರಿಗೂ ಬೇಕಾಗಿಲ್ಲ. ತನಗಾರಾದರೂ ಕರುಣೆ ನೀಡುವರೇ ? ಎಂದು ಆಕೆ ಸುತ್ತು ಮುತ್ತು ನೋಡಿದಳು. ಹುಣಿಸೆ ಮರ, ಹಾಳುಗೋಡೆ, ಬೀಳುಹೊಲ — ನೀನು ಹಾಳು ಭಾವಿ ಬಿದ್ದರೆ ನಮಗೇನು – ಎನ್ನುವವರಂತೆ ತಟಸ್ಥಭಾವದಿಂದಿದ್ದವು. ಭಾವಿಯಲ್ಲಿ ಗೂಡುಮಾಡಿದ ಹಕ್ಕಿಗಳು ಜಕ್ಕಣಿ - ಕರೆವಂತೆ ಗುಬ್ಬಳಿಸಿದವು " ನೀರಿನ ತಳವೆ ನಿನಗೆ ತವರು, ಬಾ, " ಎನ್ನುವಂತ ತಣ್ಣನೆಯ ನೀರು ಕಣ್ಣ ನೆಳೆದಿತು. ಈಕೆ ಭಾವಿಯನ್ನು ಹಣಿಕಿ ಹಾಕಿದಾಗ ಬಿದ್ದ ಕಣ್ಣೀರಿಗೆ ನೀರು ನಡುಗಿತು. ಈಗಾಗಲೇ ತನ್ನ ಜೀವ ನೀರಿನ ತಳಕ್ಕೆ ಹೋಗಿ ಕುಳಿತಂತೆ ತನ್ನ ಪ್ರತಿಬಿಂಬ ತೋರಿತು. ಹೌದು ತಾನು ಅಲ್ಲಿಗೆ ಹೋಗಬೇಕು. ಅಲ್ಲಿ ಬಯ್ಯುವವರಿಲ್ಲ, ಬಾರಿಸುವವರಿಲ್ಲ ಎಲ್ಲವೂ ತಣಿವು, ತಣ್ಣಗೆ, ಅವಳ ಪ್ರೇತವು ಅವಳನ್ನು ಈಗಳೆ ಪಾಣಿಗ್ರಹಣ ಮಾಡಿ ಎಳೆಯುತ್ತಿತ್ತು.

ತಾನು ನೀರಿಗೆ ಬಂದವಳು, ಎಷ್ಟು ಹೊತ್ತಾಯಿತು, ಏನು ಮಾಡುತ್ತಿರುವಳೆಂಬ ಅರಿವು ಅವಳಿಗಿರಲಿಲ್ಲ. ಒಂದು ಲೋಕದ ಗುರುತ್ವಾಕರ್ಷಣದ ತೆಕ್ಕೆಯನ್ನು ತಪ್ಪಿಸಕೊಂಡ ಧೂಮಕೇತು

ವ್ರೊಂದು ಅಧೋಲೋಕಕ್ಕೆ ಧುಮುಕಲು ಹೊರಟಂತೆ ಅವಳ ಜೀವದ ಚಿಕ್ಕೆಯೂ ತನ್ನ ಬಂಧಗಳನ್ನೆಲ್ಲ ತಟತಟನೆ ಹರಿದುಕೊಂಡ ಬೇರೆ ಸೆಳವಿಗೆ ಬಿದ್ದಿತ್ತು. ಕೊಡಕ್ಕೆ ಕಟ್ಟಬೇಕಾಗದ! ಉಕ್ಕಡ ವನ್ನು ಅವಳು ತನ್ನ ಕೊರಳಿಗೆ ಕಟ್ಟಿಕೊಂಡಳು. ನೆರೆಯ ಹುಣ ಸೆಯ ಮರದಿಂದ ಹಾಲಕ್ಕಿಗಳೆರಡು ಚಿಲಿಪಿಲಿ ಗುಟ್ಟಿದವು. ಈಕೆ ತಾನಿದೇನು ಮಾಡುತ್ತೇನೆಂದು ಕೊರಲಿನ ಕುಣಿಕೆಯನ್ನು ನಡು ವಿಗೆ ಬಿಗಿದು ಸರಿಮಾಡಿದಳು. ಅವಳ ಕೆಲಸವೆಲ್ಲ ಮೈದುಂಬಿದಂತೆ ಆವೇಶದಿಂದ ಸಾಗಿತ್ತು. ಹಗ್ಗದ ಒಂದು ತುದಿಯನ್ನು ಅವಳು ಮೇಲಿನ ತೊಲೆಯ ಅಡ್ಡಗಂಬಕ್ಕೆ ಬಿಗಿದಳು. ಭಾವಿಗ ನಮಸ್ಕಾರ ಮಾಡಿ ದಳು. ಸೂರ್ಯನಿಗೆ ನಮಸ್ಕಾರ ಮಾಡಿದಳು. ತನ್ನ ಸೆರಗು, ಕೂದಲು ಸಾವರಿಸಿ ಕೊಂಡಳು. ಭಾವಿಯ ತುದಿಗೆ ತನ್ನ ಪಾದ ಇಟ್ಟಳು. ಹಿಂದೆ ಯಾರದೋ ಕಾಲಸಪ್ಪಳವಾಯಿತು. ಹಿಂದುರುಗಿ ನೋಡಿದಳು. ಯಾರೂ ಇರಲಿಲ್ಲ ಅವಳು ಹಗ್ಗವನ್ನು ಮೈಗೆ ಸುತ್ತಿಕೊಂಡಳು. ಭಾವಿಯಲ್ಲಿ ಇಳಿಯಲು ಸಿದ್ಧಳಾದಳು. ಯಾರೋ ಅತ್ತಂತಾಯಿತು. ಅದಾರು ? ಯಾರಗೊಡವೆ ಇವಳಿಗೇನು ? ಇವಳಿಗಾರಿದ್ದಾರೆ ? ಅವಳು ಹಗ್ಗವನ್ನು ನಮಸ್ಕರಿಸಿದಳು. ಯಾರೋ ಕೂಗಿದರೇನು ? ಕೂಗಿದರೋ—? ಅತ್ತರೊ—? ತನ್ನ ಕೂಸೇನು ? ಕುಡಿದು ಮಲಗಿ ಬಹಳ ಹೊತ್ತಾಯಿತು. ಎದ್ದಿರಬಹುದು. ಹಸಿದಿದ್ದೀತು. ಏಕೆ ಅತ್ತಿರಲಾರದು ? ಅವಳು ತನ್ನ ಹಗ್ಗದ ಸುತ್ತನ್ನು ಬಿಡಿಸಿದಳು, ಉಕ್ಕಡವನ್ನು ಉಚ್ಚಿದಳು. ಬರಿ ಕೊಡವನ್ನು ಬಗಲಿಗೆತ್ತಿ ಹೊರ ಟಳು. ಎಲ್ಲಿಗೆ ? ಎಲ್ಲಿ ಮನೆ ? ಎಲ್ಲಿ ಭಾವಿ ? ಕೂಗುವವರಾರು ? ಕೇಳಿಸಿದ್ದೇನು ? ಈಗಾರೂ ಅಳುತ್ತಿಲ್ಲ, ಕರೆಯುತ್ತಿಲ್ಲ. ತಾನು ಹುಚ್ಚಿ, ತನ್ನ ಭ್ರಮೆ ಇದು. ಆಕೆ ಮತ್ತೆ ಭಾವಿಯತ್ತ ಹೊರಳಿದಳು. ಅಗೋ ಕಾಳ್ ಕಾಳ್ ಎಂದು ಮಗುವಿನ ಅಳುವು, ಕರೆ ! ಆಕೆ ಮತ್ತೆ ಮನೆಯತ್ತ ಹೊರಳಿದಳು. ಅತ್ತ ನೋಡಿದಳು, ಇತ್ತ ನೋಡಿ ದಳು; ಮಟಮಟ ಮಧ್ಯಾಹ್ನ ! ಭಾವಿಯಲ್ಲಿ ಗೂಡು ಮಾಡಿದ

ಹಕ್ಕಿಗಳೆರಡು ಕೂಜಿಸುತ್ತ ಅತ್ತ ಹೋದವು. ತನ್ನ ಕೊಡ ಬಂದು. ತಾನು ಬಂದು ಎಷ್ಟು ಹೊತ್ತಾಯಿತು ! ಆಕಾಶವಾಣಿ ಬಂದಂತೆ ಇನ್ನೂ ಕೂಸು ಕರೆಯುತ್ತಿದೆ. ಪಾಪ, ಅದಕ್ಕೆ ತಾನಲ್ಲದೇ ಯಾರು? ಅತ್ತೆಯವರಿಗೆ, ಮಾವನವರಿದ್ದಾರೆ. ಮಾವನವರಿಗೆ ಅವರ ಮಗನಿದ್ದಾನೆ ಅವರಿಗೆ ತಾನಿಲ್ಲದಿದ್ದರೆ ಇನ್ನೊಬ್ಬಳು ಮಾಲೆ ಹಿಡಿದ ಕುಳಿತಿದ್ದಾಳು ! ತನ್ನ ಮಗುವಿಗೆ ತಾನಲ್ಲದೆ ಯಾರು ? ಹೌದು ತನ್ನ ತಾಯಿಗೆ ತಾನಲ್ಲದೆ ಯಾರು ? ಬರುವವಳು ಬಂದಾಗ ಬರಲಿ. ಭ್ರಮೆ ಹಿಡಿದವರ ಕೈ ಬಿಡುವದೇ ? ಅವರು ತನಗೆ ಏನೂ ಕಂದಿಲ್ಲವಲ್ಲ ! ತನ್ನನ್ನು ಕಣ್ಣೀರ್ತಂದು ನೋಡುತ್ತಾರೆ. ಹೌದು ಅವರೂ ಹಸಿದಿದ್ದಾರೆ, ಮಾವನವರು ಏನಂದಾರು ? ಅತ್ತೆಯವರು ಏನಂದ್ಕೊಂಡಿರಬಹುದು ? ಏನು ನೊಂದುಕೊಂಡಿರಬಹುದು !

ವಾತ್ಸಲ್ಯ, ಪತಿಭಕ್ತಿ, ಕೃತಜ್ಞತೆ, ಆದರ, ಇವೆಲ್ಲ ನಾಲ್ಕೆಳೆಯ ಹಗ್ಗವಾಗಿ ಹೊಸೆದು ಆಕೆಯನ್ನು ಮನೆಯತ್ತ ಎಳೆಯುತ್ತಿದ್ದವು. ಆಕೆ ಭಾವಿಗೆ ಬಂದು ಕೊಡಸೇದಿದಳು. ಬಿರಬಿರನೆ ಮನೆಗ ಹೊರಟಳು. ಕೂಸಿನ ದನಿ ಕಿವಿದುಂಬಿತ್ತು. ವಾತ್ಸಲ್ಯವು ಎದೆದುಂಬ ಬಂದಿತ್ತು.

ಹಾದಿಯಲ್ಲಿ ಒಬ್ಬ ಮುತ್ತೈದೆ ಎಷ್ಟೊತ್ತಿಗವ್ವಾ ನೀರಿಗೆ ಹೋಗೋದು ಎಂದಳು. ಗುಡಿಯ ಹತ್ತಿರ ಬೆಕ್ಕೊಂದು ಬಲಕ್ಕೆ ಹೋಯಿತು ಈಕೆ ದೇವರಿಗೆ ತಲೆ ಬಾಗಿಸಿದಳು. ಕೈ ಜೋಡಿಸುವ ಸನ್ನೆ ಮಾಡಿದಳು. ಮನೆಗೆ ಬಂದಾಗ ಮಾವನವರು ತಾಂಬೂಲ ಮೆಲ್ಲುತ್ತಿದ್ದರು. ಕೂಸು ಯಜಮಾನರ ತೊಡೆಯ ಮೇಲಿತ್ತು. ಅತ್ತೆ 'ಬಾ, ತಾಯಿ, ಬಿಸಿಲಲ್ಲಿ ಹೋಗಿದ್ದಿ. ಭಾವಿಯ ಮೇಲೆ ಯಾರಿರತಾರ ? ನಾನೇ ಕಳಿಸಬಾರದಿತ್ತು ' ಎಂದು ಮರುಗಿದಳು.

ಕೊಡವನ್ನು ದೇವರ ಬದಿಗಿಟ್ಟು ಮೈಯ ಮುಖದ ಬೆವರೊರೆಸುವಾಗ ನಾದಿನಿ ಮಗುವನ್ನು ತಂದು ಮಡಿಲಲ್ಲಿಟ್ಟಳು. ಅದು ಆಗ ಅಳಹತ್ತಿತು. ತನಗಾಗಿ ಒಂದು ಜೀವಂತ ಜಗತ್ತು ಅಳುತ್ತಿರುವಾಗ,

ಯಾರದೋ ಮಾತಿಗಾಗಿ, ಮಧ್ಯಾಹ್ನದ ಬೇಸರಕ್ಕೆ, ತಾನು ಜೀವಕ್ಕೆರವಾಗುತ್ತಿದ್ದೆನಲ್ಲಾ ಎಂದು ಆಕೆಗೆ ಎನಿಸಿತು. ತಾಯಿಯ ನೆನಪಾಗಿ ಕಣ್ಣೀರು ಬಂತು. ಅದನ್ನೊರಿಸಿ ತಮ್ಮ ಕುಲದೇವರಿಗೆ ಮನದಲ್ಲಿಯೇ ಆಕೆ ಬಾಗಿದಳು. ಅತ್ತೆ, ಅತ್ತಿಗೆ, ನಾದಿನಿಯರು ಊಟಕ್ಕೆ ಕುಳಿತಾಗ ಮಗುವೂ, ಮನೆಯೂ ನಲಿಯುತ್ತಿತ್ತು



# ಏ ಕಾ ಕಿ ನೀ

ಕಣ್ಣು ಮುಸುಕು ಇರುವಾಗಲೆ ಅವಳು ಊರ ಹೊರಗಿನ ಬಾವಿಗೆ ನೀರಿಗೆ ಹೋದಳು. ಹಾದಿಯಲ್ಲಿ ಒಂದು ಮನೆಯ ಕಟ್ಟೆಯ ಮೇಲೆ ಒಬ್ಬ ಸಣ್ಣ ಹುಡುಗಿಯು ತನ್ನ ಚಿಕ್ಕ ತಮ್ಮನನ್ನು ಚಂದಪ್ಪನ ಕಡೆಗೆ ಬೊಟ್ಟುಮಾಡಿ ತೋರಿಸಿ ರಮಿಸುತ್ತಿದ್ದಳು ಸಂಜೆಯಾದರೂ ತನ್ನ ಹುಡುಗ ಮನೆಗೆ ಬರಲಿಲ್ಲವಲ್ಲ ಎಂದು ಒಬ್ಬ ತಾಯಿ ಓಣಿಯಲ್ಲಿ ಹೋಗಿ ಹುಡುಕಿ ತನ್ನ ಮಗನನ್ನು ಮನೆಗೆ ಕರೆತರುತ್ತಿದ್ದಳು ಒಂದು ಮನೆಯ ಮುಂದೆ ಎರಡು ಅಗ್ಗಿಷ್ಟಿಕೆಗಳು ಹೊತ್ತುತ್ತಿದ್ದವು ಗುಡಿಯ ನೆರೆಮನೆಯಲ್ಲಿ ಅಳುವ ಕಂದನ ಕಿರಿ ಕಿರಿ ಧನಿಯೂ ಅದನ್ನು ಸಂತೈಸಿ ಹಾಡುವ ತಾಯಿಯ ಧನಿಯೂ ಒಂದಕ್ಕೊಂದು ಮೇಲಾಗಿ ಕೇಳಬರುತ್ತಿದ್ದವು. ಹುಡುಗರು ಕೆಲವರು ಹಕ್ಕಿಗಳಂತೆ ತಮ್ಮ ಗೂಡಿನ ಕಡೆಗೆ ಹೊರಟಿದ್ದರು. ಎಲ್ಲರಿಗೂ ಜೀವನದಲ್ಲಿ ಒಂದು ಎಳತ, ಸೆಳತ ಇತ್ತು ಇದನ್ನೆಲ್ಲ ನೋಡುವ ಅವಳಿಗೆ ಯಾವ ಎಳೆತವಿತ್ತೋ? ಅವಳ ಜೊತೆಗೂ ಯಾರೂ ಇರಲಿಲ್ಲ ಬಾವಿಗೆ ಹೋದರೆ ನೀರಿನ ಎಳೆತ, ಮನೆಗೆ ತಡಮಾಡಿ ಹೋದರೆ ಬೆನ್ನಮೇಲೆ ಸೆಳೆತ, ಇದರ ಪರಿಚಯ ಏಕಾಕಿನಿಗೆ ಇತ್ತು

ಅವಳ ಕೂದಲದಲ್ಲಿ ಓರಣವಿರಲಿಲ್ಲ; ಕಣ್ಣಿನಲ್ಲಿ ನಿರದಿಷ್ಟ ಚಾಂಚಲ್ಯವೂ, ಭಯಾನಕ ಭಣಭಣವೂ ಒಟ್ಟುಗೂಡಿದ್ದವು. ನದಿ

ಗೆಗೆ ತಾಳವಿರಲಿಲ್ಲ. ನೆಲ ನೋಡಿ ಬೆಸತ್ತು, ಮುಗಿಲ ಕಡೆಗೆ ಮುಖ ಮೇಲಕ್ಕೆತ್ತಿದಾಗ, ಅವರ ಮೇಲೆ ಚಂದ್ರನ ಕಿರಣ ಬಿದ್ದರೂ ಅವಳ ಕಣ್ಣಲ್ಲಾಗಲಿ, ತುಟಿಯಲ್ಲಾಗಲಿ, ಮುಖದಲ್ಲಾಗಲಿ ಪ್ರತಿಕಿರಣ ಯಾವುದೂ ಸೂಸುತ್ತಿರಲಿಲ್ಲ. ಹಳ್ಳದಲ್ಲಿ ಎಲ್ಲಿಂದಲೊ ಉದುರಿ ಬಿದ್ದ ಒಂದು ಹಳೆಯ ಎಲೆಯಂತೆ ಅವಳ ಬಾಳು ಸಾಗಿತ್ತು. ಕಾಲ ಚಕ್ರದಿಂದ ಸಂದಷ್ಟೇ, ಅವಳ ದಿನಚಕ್ರ ತಿರುಗುತ್ತಿತ್ತು. ಗೊತ್ತಾದ ಹತ್ತು ಹನ್ನೆರಡು ಮಡಿಕೆಯ ಕೆಲಸಗಳಲ್ಲಿ ಅವಳ ಕೈ ಸುತ್ತಾಡಿ, ಅವಳ ದಿವಸವು ಗಡಿಯಾಳದ ದಿವಸದಂತೆ ಮುಗಿಯುತ್ತಿತ್ತು. ಇಷ್ಟೆ, ಅವಳ ಗಡಿಯಾಳಕ್ಕೆ ಕೊಟ್ಟ ಕೀಲಿ ತೀರಿದ್ದಿಲ್ಲ.

ಒಬ್ಬಳೇ ನೀರಿಗೆ ಹೋದಳು, ಒಬ್ಬಳೇ ಸೆದಿದಳು, ಒಬ್ಬಳೇ ತಿರುಗಿ ಮನೆಗೆ ಹೊರಟಳು ಅವಳ ಹಿಂದಿನಿಂದ ಬಂದವರೂ ಅವಳ ಸರಿಗೆ ಬಂದವರೂ, ಕೆಲವರು ಅತ್ತೆಮನೆ ಸೊಸೆಯರು, ತವರುಮನೆ ಮಕ್ಕಳು ಅವಳ ಮುಂದೆ ಹೋದರು "ಅವರಿಗೆ ಸಂಧ್ಯಾವಂದನೆಗೆ ನೀರಿಡಬೇಕು" ಎಂದು ಕೆಲವರು, "ನಮ್ಮವನು ಎದ್ದಿದ್ದಾನು, ಇಂದು ಅಡ್ಡ ಹೊತ್ತಿಗೆ ಮಲಗಿದ್ದ" ಎಂದು ಒಬ್ಬರು, "ಮುಂಜಾನೇ ನೀರು ತರಬೇಕಾಗಿತ್ತು, ಸುಳ್ಳೇ ಸಂಜೆಗೆ ಬಂದೆ" ಎಂದು ಮತ್ತೊಬ್ಬರು. ಪ್ರತಿಯೊಬ್ಬರಿಗೂ ಮನೆಗೆ ಆತುರಿಸಿ ಹೋಗಲು ಕಾರಣಗಳಿದ್ದವು. ಅವಳಿಗೆ ಏನು ಕಾರಣವಿತ್ತು? ಮದುವೆಯಾದ ಗಂಡನು ಆದಾದ ಮೇಲೆ ಒಂದೆರಡು ವರ್ಷಗಳಲ್ಲಿಯೇ ಎಲ್ಲಿಯೋ ಯಾತ್ರೆಗೆ ಹೋಗಿದ್ದನು. ಸತ್ತನು ಎಂದು ಕೆಲವರಾಡುತ್ತಿದ್ದರು. ಹುಚ್ಚನಾಗಿದ್ದಾನೆ ಎಂದು ಬಲ್ಲವರಂತೆ ಮತ್ತೆ ಬೇರೆ ಜನರು ಹೇಳುತ್ತಿದ್ದರು. ಅವಳ ಪಾಲಿಗೆ ಎಲ್ಲವೂ ಸರಿಯಾಗಿತ್ತು. ಅವಳಿಗೆ ಮಕ್ಕಳಿರಲಿಲ್ಲ ಅವಳಿಗೆ ತವರೆಂಬ ಮಮತೆಯವರಾರೂ ಇರಲಿಲ್ಲ ಇಂಥ ಹತಭಾಗಿನಿಯು ಯಾರಿಗೆ ಬೇಕಾಗಿರಬೇಕು ?

ಅವಳು ಇಂದು ಮನೆಮನೆಯ ಮುಂದೆ ನೋಡಿದ ನೋಟವು ಅಷ್ಟೇನು ಅಸಾಮಾನ್ಯವಲ್ಲ ಅವರೂ ಎಲ್ಲಿಂದಲೋ ಸುಳಿಗಾಳಿ

ತಾಕಿ ಬರಡು ಮರದ ಒಂದೆರಡು ಎಲೆಗಳೂ ಉಲಿಯುವಂತೆ, ಅವಳ ತಲೆಯಲ್ಲಿ ಒಂದೆರಡು ವಿಚಾರಗಳು ಗುಜುಗುಜು ಮಾಡುತ್ತಿದ್ದವು. ಮುಳಿತುನಿಂತ ನೀರಿನಲ್ಲಿ, ಅವರ ಮೇಲಿಂದ ಆಕಾಶದಲ್ಲಿ ಹಾರಿ ಹೋಗುವ ಹಕ್ಕಿಯು ಬಾಯೊಳಗಿಂದ ಬಿದ್ದ ಕಟ್ಟಿಗೆಯ ತುಂಡೊಂದರಿಂದ ತರಂಗಗಳೇಳುವಂತೆ ಅವಳ ಮೈ ಏಕೋ ಝುಮ್ ಎಂದಿತು. ಬಾವಿಯಿಂದ ಮನೆಗೆ ಬರುವ ಹಾದಿಯಲ್ಲಿ ಬಲಭೀಮನ ಗುಡಿಯಿತ್ತು. ಅಲ್ಲಿ ಒಬ್ಬ ವೈರಾಗಿಯು ಬಂದಿರುವನೆಂದೂ ಅವನು ಸಾಮುದ್ರಿಕ ಹೇಳುವನೆಂದೂ, ಅವಳು ಅಂದೇ ಕೇಳಿದ್ದಳು. ಅಂತೆಯೇ ಅವಳ ಅಲಸಗತಿಗೆ ಮತ್ತೊಂದಿಷ್ಟು ಮಂದತೆ ಬಂದಿತ್ತು. ಸ್ವಲ್ಪ ಕತ್ತಲಾದೊಡನೆ ದೇವರಿಗೆ ಹೋದಂತೆ ಮಾಡಿ ಆ ವೈರಾಗಿಗೆ ತನ್ನ ಕೈ ತೋರಿಸಿದರೆ ಹೇಗೆ? ಎಂಬ ವಿಚಾರವು ಅವಳಿಗೆ ಕಾಲ್ತೊಡಕಾಗಿತ್ತು. ಮಕ್ಕಳಾಗುವವೇ ಎಂದು ಕೇಳಬೇಕೆ? ಗಂಡನ ಸುಖವಿದೆಯೇ ಎಂದು ಕೇಳಬೇಕೆ? ಅಥವಾ ಹಾಗೇ ತನಗೆ ಸುಖಸೌಭಾಗ್ಯಗಳಿವೆಯೋ ಎಂದು ಕೇಳಬೇಕೆ? ಕೇಳಬೇಕಾದರೂ ಏನು? ಕೇಳಬೇಕೋ ಕೇಳಬಾರದೋ? ಕೇಳದಿದ್ದರೆ ತನ್ನ ಈ ಪ್ರಶ್ನೆಗಳಿಗೆ ಯಾರು, ಎಂದು ಎಂದು ಉತ್ತರ ಕೊಡತಕ್ಕವರು?

ಅವಳು ಗುಡಿಗೆ ಬರುವಹೊತ್ತಿಗೆ ಮಬ್ಬುಗತ್ತಲಾಗಿತ್ತು. ಆ ಹಾಳು ಗುಡಿಗೆ ಬಹಳ ಜನರೂ ಬರುತ್ತಿರಲಿಲ್ಲ. ಬರುವ ಒಬ್ಬಿಬ್ಬ ಹಳೆಯ ಭಕ್ತರೂ ತೀರ ಸಂಜೆಗೆ ಬಂದು ಹೋಗಿದ್ದರು. ಪೂಜಾರಿಯು ಸಂಜೆಯ ದೀಪ ಎಣ್ಣೆ ಮಾಡಿ ಹೋಗಿದ್ದನು. ಅವಳು ಗುಡಿಹೊಕ್ಕಾಗ ವೈರಾಗಿಯು ಅವರ ಪದ್ಧತಿಯಂತೆ ಬೆಂಕಿ ಹೊತ್ತಿಸಿ ಕುಳಿತಿದ್ದನು. ಕೊಡವನ್ನು ಕೆಳಗಿರಿಸಿ ಅವಳು ದೇವರಿಗೆ ನಮಸ್ಕಾರ ಮಾಡುವಾಗ ಅವನು ಧ್ಯಾನಸ್ಥನಂತೆ ಕಾಣುತ್ತಿದ್ದನು. ಅವಳು ಅವನಿಗೂ ನಮಸ್ಕಾರ ಮಾಡಿದಾಗ ಅವನು ಏನೂ ಆಶೀರ್ವಾದವನ್ನೂ ಕೊಡಲಿಲ್ಲ. ಅವಳು ಏನೆಂದು ಮಾತು ಪ್ರಾರಂಭಿಸಬೇಕು? ಮಕ್ಕಳ ಕೂಗು ಅವಳ ಎದೆದುಂಬಿತ್ತು. ಅವಳು ಅವನೆದುರು ಕುಳಿತು

ಬಿಟ್ಟಳು. ಬೈರಾಗಿಯು ಕಣ್ತೆರೆದು 'ಇದೇನಿದು ? ಯಾರು ತಾವು? ಎಂದನು.

ತನ್ನ ಎಡಗೈಯನ್ನು ಒದ್ದೆ ಮಾಡಿ ತೊಡೆಗೆ ಒರೆಸಿಕೊಂಡು ಬೈರಾಗಿಯ ಎದುರು ಹಿಡಿದು 'ನನಗೆ ಮಕ್ಕಳಾಗುವವೇ ? " ಎಂದು ಕೇಳಿದಳು. ಬೈರಾಗಿಯು ಕೈ ಹಿಡಿದ. ಅವಳ ಮೈ ಜುಮ್ಮೆಂದಿತು. ತಾನು ಕೈ ತೋರಿಸಿ ಅವಲಕ್ಷಣ ಮಾಡಿಕೊಂಡೆನೆಂದು ಅವಳಿಗೆ ತೋರಿತು, ಕೇಳಿದ ಪ್ರಶ್ನೆಯೇ ತಪ್ಪಾಯಿತೇನೋ ಎನಿಸಿತು. ಅವಳಿಗೆ ಬೈರಾಗಿಯ ಕಡೆಗೆ ನೋಡುವ ಧೈರ್ಯವಾಗಲಿಲ್ಲ. ಕಾಲವು ಸ್ಪ್ರಿಂಗು ಹರಿದ ಗಡಿಯಾರದಂತೆ ಸರ್ರನೆ ತಿರುಗಿದಂತಾಯಿತು. ಕೈ ಕೊಸರಿಕೊಳ್ಳಬೇಕೆಂದರೆ ಅದರಲ್ಲಿ ಜೀವವಿರಲಿಲ್ಲ. ಮೈಗೆ ಜಡತೆ ಬಂದಿತ್ತು. ಕಣ್ಣಿಗೆ ನಿದ್ದೆ ಕವಿದಂತಾಗಿತ್ತು. ದುಃಸ್ವಪ್ನದೊಳಗಿಂದ ದಡಪಡಿಸಿ ಎದ್ದಂತೆ ಅವಳು ಎದ್ದುಬಿಟ್ಟಳು, ಕೊಡವನ್ನೆತ್ತಿ ಹೊರಬಿದ್ದಳು, ಬೈರಾಗಿ ಬೆರಗಾಗಿ, ಬಾಯ್ಬಿಟ್ಟು, ಬಾಗಿಲ ಕಡೆಗೆ ನೋಡುತ್ತ, ಹಾಗೇ ಕುಳಿತ

೨

ಅವಳು ಮನೆಗೆ ಬಂದ ಮೇಲೆ ದಿನಂಪ್ರತಿಯ ಪುಷ್ಪಾಂಜಲಿಗಳಾದವು. ಎಣ್ಣೆ ಕಾಣದ ತನ್ನ ಮುಡಿಯಲ್ಲಿ ಅವುಗಳನ್ನು ಹೂವಿನಂತೆಯೇ ಅವಳು ಧರಿಸಿದಳು ಊಟ, ಉಡಸಾರಣೆ, ಉಪಕರಣಿಗಳು, ಉದ್ದಕ್ಕೆ ನಾಗಿದವು ಯಥಾಪ್ರಕಾರ ನಿದ್ರೆಯ ಹೊತ್ತು ಬಂತು. ಬಡವರಿಗೂ ಕೂಡ ಎರವಾಗದಿದ್ದ ನಿದ್ದೆ ಇವಳಿಗೂ ಬಂತು. ಬೆಳಗುಜಾವ ಎದ್ದಾಗ, ಬಿಸಿಲಿನಲ್ಲಿ ಬೆವರಿಟ್ಟವನು, ಹೊಳೆನೀರಲ್ಲಿ ಮಿಂದೆದ್ದಂತೆ, ಮೈಗೊಂದು ಲಘುತ್ವ, ಮನಕ್ಕೊಂದು ಪ್ರಸನ್ನತೆ, ಬಂದಿತ್ತು ಅವಳಿಗೆ. ಯಾವದೋ ಸುಖಸ್ವಪ್ನದ ರಾಜ್ಯದೊಳಗಿರಿದ ಅವಳು ಹಾಯ್ದು ಬಂದಿದ್ದಳು ಅರೆನುಸಕಾಗಿ ಅದರ ನೆನಪಾಗ

ಹತ್ತಿತು. ನೆನಪಾದಂತೆ ಅವಳಿಗೆ ಅದೆಲ್ಲ ಹಳವಂಡಗನಸಿನಂತೆ ತೋರಿತು. ಮತ್ತೆ ಅವಳ ಮುಖಮುದ್ರೆ ಖಿನ್ನವಾಯಿತು. ದಿನದ ರಥವು ಮತ್ತೆ ತನ್ನ ಚಕ್ರಗಳನ್ನು ತಿರುಗಿಸಹತ್ತಿತು. ಅವಳು ಪರಸಿಗ ಲ್ಲಾಗಿ ತನ್ನ ಮೈಯನ್ನು ಎಂದಿನಂತೆ ಅದಕ್ಕೆ ಮತ್ತೆ ಒಡ್ಡಿದಳು. ಗಾಣದ ಎತ್ತು ಕಣ್ಣು ಕಟ್ಟಿಕೊಂಡು ತಿರುಗುವಂತೆ ಅವಳು ದಿನಕ್ರಮ ದಲ್ಲಿ ಕಾಲಿಟ್ಟಳು.

ಅವಳು ಮೈ ತೊಳೆದುಕೊಂಡು ದೇವರ ಪೂಜೆಯ ಸಾಹಿತ್ಯ ವನ್ನು ಸರಿಪಡಿಸಬೇಕೆನ್ನುವಾಗ ‘ ರಾಮಭಟ್ಟರೆ ಬರ್ರಿ, ಹೊರಗೆ ಬರ್ರಿ, ನಿಮ್ಮ ಮಗ ಬಂದಿದ್ದಾನೆ ’ ಎಂದು ಯಾರೋ ಕೂಗಿದರು. ಮನೆಯ ಯಜಮಾನತಿ ಅಷ್ಟರಸಿ ಓಡಿ ಬಂದು ‘ ಅವರು ಮನೆಯಲ್ಲಿಲ್ಲ ಯಾಕೆ? ಏನು ಬೇಕಾಗಿತ್ತು ? ’ ಎಂದು ಕೇಳಿದಳು. ‘ ಅಯ್ಯೋ ತಾಯಿ, ನೀವು ಪುಣ್ಯವಂತರು, ನಿಮ್ಮ ಮಗ ಬಂದಿದ್ದಾನೆ ನಮ್ಮ ಮನೆಯ ಲ್ಲಿಯೇ ಕುಳಿತಿದ್ದಾನೆ. ಎಲ್ಲಿದ್ದಾರೆ ಭಟ್ಟರು ? ’ “ ಅವರು—ಅವರು ಹೋಗಿದ್ದಾರೆ, ನಾಳೆ ಬರತಾರ, ಹೌದು, ಹಳ್ಳಿಗೆ, ಲಕ್ಷ್ಮಣಗೌಡ ರನ್ನು ಕಂಡು ಬರಲಿಕ್ಕೆ, . ಹೊಟ್ಟೆ ಇದೆಯಲ್ಲ ” ಮುದಿಕ ಮಾತ್ರ್ಯದ ಕಣ್ಣೀರು ತೆಗೆದಳು; ಬಂದವರು ಅಂದರು ‘ ಇನ್ನೇನು ಮಗ ಬಂದ ಹಡೆದ ಹೊಟ್ಟೆ ತಣ್ಣಗಿರಲಿ. ಬರ್ರಿ ನಮ್ಮ ಮನೆಗೆ ನುಬ್ಬಾ ಜೋಯಿಸರನ್ನು ಕರೆಕಳಿಸಿದ್ದೇನೆ. ರಾಮದೇವರ ಗುಡಿಯಲ್ಲಿ ಮಗ ನನ್ನು ಕಂಡು, ಮನೆಗೆ ಮರಳಿ ಬರ್ರಿ, ಹನ್ನೆರಡು ವರ್ಷ ಆದವಲ್ಲವೇ, ಮಗ ದೇಶಾಂತರಕ್ಕೆ ಹೋಗಿ ? ’ ತನ್ನ ತಲೆ ತಲೆತುಂಬಾದ ಸೆರೆ ಗೂದಲು ಸವರುತ್ತ ‘ ನೂರು ವರ್ಷ ! ’ ಎಂದಳು ಮುದುಕಿ, ಬಂದ ವರು ನಕ್ಕು ‘ ದುಃಖಕ್ಕೆ ಎಷ್ಟಂದರೂ ವರ್ಷ ಕಡಿಮೆ. ಮಗನನ್ನು ಮತ್ತೆ ನೋಡಿದಿರಲ್ಲ ? ನೀವು ಪುಣ್ಯವಂತರು ! ’ ಬೇಗ ಬರಲು ಹೇಳಿ ಬಂದವರು ಮುಂದೆ ಹೋದರು. ಮುದುಕಿ ಕೈಕಾಲು ಮುಖ ಮತ್ತೆ ತೊಳೆದುಕೊಂಡು ದೇವರಿಗೆ ಹೋಗಿ ನಮಸ್ಕಾರ ಮಾಡಿದಳು. ಹಣೆ ತುಂಬ ಕುಂಕುಮ ತೀಡಿದಳು. “ ಯಾರೋ ಬಂದಿದ್ದಾರಂತೆ. ಏನೋ ನಿನ್ನ ಭಾಗ್ಯ. ನೀರು ಕಾಯಿಸಿ ಇಡು ಹಣಮಂತರಾಯರ

ಮನೆಯ ಹಾಲು ಬಂದಿದೆ. ಅದು ಕಾದಿರಲಿ. ಒಳಗೆ ಒಂದು ಮಣೆ ಹಾಕಿರು. ಅಲ್ಲಿ ಹೊರಗೆ ಒಳಗಿನ ಜಮಖಾನೆ ಹಾಸಿರು. ನಿನ್ನ ಭಾಗ್ಯ. ಇದೇ ಈಗ ಬರುತ್ತೇನೆ" ಎಂದಳು ಅತ್ತೆ. ಸೊಸೆಗೆ ಪೂರ್ಣ ಅರ್ಥವಾಗಲಿಲ್ಲ ಕಲಶ ತಿಳಿಯಿತು. ಯಾರೋ ಮನೆಗೆ ಬರುತ್ತಾರೆ ಎಂದು ತೋರಿತು. ಮುದುಕಿ ಹಿತ್ತಲಲ್ಲಿ ಎರಡು ಹೂಗಳನ್ನೂ ಹತ್ತು ತುಳಸಿಗಳನ್ನೂ ಕೊಯ್ದಳು ಉಡಿಯಲ್ಲಿ ಅಕ್ಕಿಯನ್ನು ಬೊಗಸೆ ಬೊಗಸೆ ತುಂಬಿದಳು. ಎರಡು ನಿಲಾಂಜನಕ್ಕೆ ನಾಲ್ಕು ಹೂ ಬತ್ತಿಗಳನ್ನು ಹಾಕಿ, ತುಂಬ ತುಪ್ಪ ಇಟ್ಟಳು. ಹಳೆಯ ಡಬ್ಬಿಯೊಳಗಿಂದ ನಾಲ್ಕು ದುಡ್ಡು ತೆಗೆದು ಟೊಂಕಕ್ಕೆ ಹಚ್ಚಿದಳು. ಮತ್ತೆ ಸೊಸೆಗೆ ಹೇಳಿದಳು—"ನೀನೂ ಮೈ ತೊಳೆದುಕೊಂಡು, ನನ್ನ ಸೀರೆ ಉಟ್ಟುಕೊಂಡು ಬಿಡು ಈ ಹೊತ್ತು. ಏನಂದೆ? ಹೊರಗೆ ಜಮಖಾನೆ ಹಾಸಿರು. ದೇವರಿಗ ಹೋಗಿ ಬರುತ್ತೇನೆ. ಎಷ್ಟು ಸುಳ್ಳೋ ಎಷ್ಟು ಖರೇನೋ, ನಿನ್ನ ಭಾಗ್ಯ" ಎಂದು ಮುದುಕಿ ಮನೆ ಬಿಟ್ಟು ಹೊರಬಿದ್ದಳು ಹೋಗುವಾಗ ಮನೆಯ ಹೊಸ್ತಿಲಕ್ಕೆ ಕೆಳಗೆ ಮೇಲೆ ಮತ್ತೊಮ್ಮೆ ಅರಿಷಣ ಕುಂಕುಮ ಒತ್ತಿದಳು. ತನಗೆ ಇಟ್ಟುಕೊಂಡಳು

ಭಟ್ಟರ ಮಗ ಬಂದನೆಂದು ಓಣಿಯಲ್ಲಿ ಸುದ್ದಿ ಹರಡಿತ್ತು. ಮುದುಕಿಯನ್ನು ಕಂಡವರೊಬ್ಬೊಬ್ಬರು "ಒಳ್ಳೆದಾಯ್ತುರೆವ್ವಾ" "ಸುಖ ಬರೋದಿತ್ತಂದರ ಹೀಂಗ ಬರ್ತ್ಯದ" "ಯಾಕ, ಭಟ್ಟರು ಎಲ್ಲಿ ಹೋಗ್ಯಾರ? ಅವರಿಗೆ ಹೇಳಿ ಕಳಿಸಿದರೇನು?" ಹೀಗೆ ಒಂದೊಂದು ಮಾತು ಹೇಳಿದರು. ಮುದುಕಿ ಎಲ್ಲರಿಗೂ ನೀರ್ತುಂಬಿದ ಕಣ್ಣುಗಳಿಂದ ಹೊಂಗುಡುತ್ತ ಮುಂದೆ ಸಾಗಿದಳು.

೩

ಸೊಸೆಯು ಭಾಗ್ಯ ಎಂಬ ಶಬ್ದ ಕೇಳಿ ಬಹಳ ವರ್ಷಗಳಾಗಿದ್ದವು. ಅತ್ತೆಯವರು ಯಾರ ಭಾಗ್ಯ ಎಂದರು? ಆಕೆಗೆ ಏನೂ ತಿಳಿಯಲಿಲ್ಲ.

ಆಕೆ ಬೇಗಬೇಗ ಮೈ ತೊಳೆದುಕೊಂಡಳು. ತನ್ನ ಹರಕು ಸೀರೆಯನ್ನೇ ಉಟ್ಟಳು. ಅತ್ತೆಯ ಸೀರೆ ಉಡಲು ಧೈರ್ಯವಾಗಲಿಲ್ಲ ಹಾಲ ಕಾಯುತ್ತಿರುವಾಗ, ನೆರೆಮನೆಯವಳೊಬ್ಬಳು ಅಡಿಗೆ ಮನೆಯಲ್ಲಿ ಹಣಿಕಿ ಹಾಕಿ “ ಇದ್ದೀರೇನು ? ” ಎಂದು ಕೇಳಿದಳು. “ ಸಾಯ ಲಿಕ್ಕೆ ನನಗೇನಾಗ್ಯದ ” ಎಂದು ಭಟ್ಟರ ಮನೆಯ ಸೊಸೆ ವಟಗುಟ್ಟಿ ದಳು. “ ಅಯ್ಯ, ಇದೇನರ್ರೀ ಮಾತು ” ಎಂದವಳೇ ಬಂದವಳು ಬಂದ ಕಾಲಿನಿಂದ ಹಿಂದೆ ಹೊರಟಳು. “ ಕುಂಕುಮ ಹಚ್ಚಿಕೊಂಡು ಹೋಗರಿ ” ಎಂದು ಸೊಸೆ ಕೂಗಿದಳು ವಾಗತ್ಯಕ್ಕಾಗಿ ಆಗ ತಿರುಗಿ ಬಂದು “ ಗಂಡ ಬಂದ ದಿನಾನಾರೆ ಛಂದ ಮಾತಾಡ್ರಿ ” ಎಂದು ಉಪದೇಶ ಮಾಡಿ ಹೊರಟುಹೋದಳು “ ಏನು ಮಾತು ? ಯಾರ ಗಂಡ ? ” ಏಕಾಕಿನಿಯ ತಲೆಯಲ್ಲಿ ಊಹೆ ನಡಯಿತು. ಬಯ್ದಂತೆ ತೋರುವ ಆ ಮಾತೂ ಅವಳಿಗೆ ಹಿತವಾಗಿ ಎನಿಸಿದವು “ ತನ್ನ ಗಂಡ ಬರುವನೇ ? ತಾನು ಇಂದು ಎದ್ದೊಡನೆ ಯಾರ ಮುಖ ನೋಡಿದ್ದೆ ? ಇಂದು ಯಾವ ವಾರ ? ಅತ್ತೆ ಒಳ್ಳೆ ಮಾತನ್ನಾಡಿ ದರಲ್ಲಾ ? ” ಬೆಳಗು ಬಿದ್ದ ಸ್ವಪ್ನದ ಮಧುರ ಸ್ಮೃತಿಯಂತೆ ಎಲ್ಲವೂ ಸವಿಯಾಗಿ ತೋರಿತು ಅರುಚಿಯೇ ಅಭ್ಯಾಸವಾದ ಬಾಯಿಗೆ ಬೆಲ್ಲವೂ ಬೆಲ್ಲಬೆಲ್ಲಸಾಗಿ ಹತ್ತುವಂತೆ ಆಕೆಗೆ ತನಗೇನೋ ಭಾಗ್ಯ ಬರುವದಿದೆ-ಎಂದಿಷ್ಟೇ ಹೊಳೆಯಿತು ನಂಬಿಗೆಯಾಗಲೊಲ್ಲದು. ಮೇಲೆ ನೋಡಿದಳು, ಹಂಚಿನ ಚಪ್ಪರದ ತೂತುಗಳೊಳಗಿಂದೆಲ್ಲ ಸೂರ್ಯನ ಬೆಳಕು ನೇರವಾಗಿ ಸುರಿಯುತ್ತಿತ್ತು ಮನೆಯ ಹೊರಬಾಗಿಲಿಗೆ ಬಂದು ನೋಡಿದಳು. ಓಣಿ ತುಂಬಿ ಬಿಸಿಲು ಹರಿಯುತ್ತಿತ್ತು ! ಇದು ಯಾವ ಮಾಸ ? ಯಾವ ದಿವಸ ? ಈಗ ಎಷ್ಟೊತ್ತಾಗಿರಬೇಕು ? ಮಧ್ಯಾಹ್ನದ ನಿದ್ದೆಯಿಂದೆದ್ದವರು ದಿಗಿಲುಗೊಂಡಂತೆ ಅವಳಿಗೆ ಕಾಲಭ್ರಮೆಯಾಯಿತು. ಜಮುಖಾನೆ ಹಾಸುವದು ನೆನವಾಗಿ ಅವಳು ಪೆಟ್ಟಿಗೆಯಿಂದ ತೆಗೆದು ಅದನ್ನು ಹಾಸಿದಳು. ಎಸುರು ಬಂದ ನೀರಿನ ಉರಿ ಕಡಿಮೆ ಮಾಡಿದಳು. ಉಕ್ಕಿಹೋದ ಹಾಲನ್ನು ಒಲೆ ಯಿಂದ ಕೆಳಕ್ಕಿಳಿಸಿ ಒಳಗಿರಿಸಿದಳು. ತನ್ನ ಹರುಕು ಸೀರಿ ಬಿಟ್ಟು

ಅತ್ತೆಯ ಸೀರೆಯನ್ನುಟ್ಟಳು. ಹಿತ್ತಲ ಎರಡು ಹೂವನ್ನು ತಂದು ದೇವರಿಗೆ ಏರಿಸಿ ತುರುಬಿಗಿಟ್ಟುಕೊಂಡಳು. ಕನ್ನಡಿ ನೋಡಿ ಹೆರಳು ಸಮಮಾಡಿಕೊಂಡಳು. ಬೈತಲ ಸಮರಿದಳು ಮಂಗಲಸೂತ್ರಕ್ಕೆ ಕೈ ಹಚ್ಚಿ ಸರಿಮಾಡಿದಳು; ನಕ್ಕಳು; ಅತ್ತಳು, ಬೆವತಳು. ತನ್ನನ್ನು ಯಾರೂ ನೋಡುತ್ತಿಲ್ಲವಲ್ಲಾ ಎಂದು ಸುತ್ತೂ ನೋಡಿದಳು.

ಒಣಿಯ ಒಬ್ಬ ಹುಡುಗ ಬಂದು ' ಕೇಶವಭಟ್ಟರು ಬಂದರೇ ?" ಎಂದು ಕೇಳಿದ. ಏಕಾಕಿನಿಗೆ ಹಿಡಿಸಲಾರದ ಹಿಗ್ಗು; ಊರಿಗೆ ತನ್ನ ಭ್ರಮೆ ಹಿಡಿಯಿತೇ ಎಂದು. ಆಕೆ ಬರಿ ಮುಗಳು ನಗೆ ನಕ್ಕಳು. ತನ್ನ ನಗೆಯೇ ತನಗೆ ಅಭಾಸವೆನಿಸಿತು. ಎಷ್ಟು ದಿವಸದಿಂದ ತಾನು ಹೀಗೆ ನಕ್ಕಿದ್ದು ಎಂದು ನೆನಿಸಹೋದರೆ ಅವಳ ಚಿತ್ತದಲ್ಲಿ ಕತ್ತಲು ಮುಸುಕಿತು ಬಂದ ಹುಡುಗ " ಎಲ್ಲಿದ್ದಾರೆ ? " ಎಂದು ಕೇಳಿದ. ಅವನು ಚಿಕ್ಕವನಿದ್ದಾಗ ಅವನನ್ನು ಭಟ್ಟರು ಎತ್ತಿ ಆಡಿಸಿದ್ದರೆಂದು ಮನೆಯಲ್ಲಿ ಮಾತನಾಡಿದ್ದನ್ನು ಕೇಳಿ ಸಂಭ್ರಮದಲ್ಲಿ ಆ ಹುಡುಗ ಓಡಿ ಬಂದಿದ್ದ. ಏಕಾಕಿನಿಯು ಒಳಗಿಂದ ದೇವರ ನೈವೇದ್ಯವನ್ನು ತಂದು ಆ ಹುಡುಗನಿಗೆ ಕೊಟ್ಟಳು. " ಎಲ್ಲಿದ್ದಾರೆ?" ಎಂದು ಅವನು ಮತ್ತೇ ಕೇಳಿದ. " ಗೊತ್ತಿಲ್ಲ " ಎಂದಳು ಏಕಾಕಿನಿ ಹುಡುಗ ಹೊರಡುವದರಲ್ಲಿದ್ದ. ಅಷ್ಟರಲ್ಲಿ ಹತ್ತೆಂಟು ಜನ ಮನೆಗೆ ಬಂದರು. ಅವರಲ್ಲಿ ಹೊಸಬರೇ ಕೇಶವಭಟ್ಟರು ಎಂದು ಊಹಿಸಿ ತನ್ನ ಮನೆಗೆ ಸುದ್ದಿ ಮುಟ್ಟಿಸಲು ಓಡಿಹೋದ.

ರಾಮಭಟ್ಟರ ಹೆಂಡತಿಗೆ ಸಂಭ್ರಮವೋ ಸಂಭ್ರಮ. ಭಟ್ಟರಿಗೆ ಕರೆಯಲೆಂದು ಒಬ್ಬರು ಹಳ್ಳಿಗೆ ಹೋಗುತ್ತೇವೆಂದರು. ರಾಮದೇವರಿಗೆ ಅಭಿಷೇಕ ಮಾಡಲು ಹೊರಟರು. ನೆರೆಮನೆಯವರು ಒಬ್ಬರು ಕಾಯಿಪಲ್ಯ ತಂದು ಇಟ್ಟರು. ಯಾರೋ ಹಾಲು ಯಾರೋ ಮಜ್ಜಿಗೆ, ಯಾರೋ ಹಣ್ಣು, ತಂದು ಕೊಟ್ಟರು. ಭಟ್ಟರ ಭಾಗ್ಯ ಊರಿನವರದಾಗಿತ್ತು. ಈ ಸಂಭ್ರಮ ಹೊರಗೆ ನಡೆದಾಗ ಸೊನೆ ಅಡಿಗೆ ಮನೆಯಲ್ಲಿ ದೇವರಿದಿರು ಕೈ ಮುಗಿದು ಕುಳಿತ್ತಿದ್ದಳು.

೬

ಆ ದಿನ ಹಗಲು ಏಕಾಕಿನಿಗೆ ಅತಿ ವಿಚಿತ್ರವಾಗಿ ಕಳೆದಿತು. ಹುಲಿಯ ಗವಿಯನ್ನು ಹೊಕ್ಕ ಪಾಪಿಯೊಬ್ಬನು, ಕ್ಷಣ ಕ್ಷಣಕ್ಕೂ ಹುಲಿಯ ಬರವಿಗಾಗಿ ಬೆದರಿ, ಅದರ ಹೆಜ್ಜೆ ಹೆಜ್ಜೆಗೂ ನಡುನಡುಗಿ, ಕೊನೆಗೆ ನಡುಗಲೂ ಬಲಗುಂದಿ ಸ್ತಂಭಿತನಾಗಿ, ಕಾಣುವದೂ ಕಾಣದ್ದೂ ಒಂದೇ ಆಗಿ, ಮೂರ್ಛೆ ಹೋಗಲೂ ಬಲ ಸಾಲದೆ, ಹಾ ಹಾರಿ, ಆದದ್ದಾಗಲಿ ಎಂದು ಬರುವದರ ಆಗಮನವನ್ನೇ ಎದುರು ನೋಡುವಂತೆ ಆಕೆ ವಿಚಾರ ಮೂಢಳಾದಳು. ತನ್ನ ಯಜಮಾನರ ಸಮಾಗಮವನ್ನು ಚಿತ್ರಿಸಲೂ ಅವಳಿಗೆ ಬುದ್ಧಿ ನಾಲಲಿಲ್ಲ ಆಕೆ ಏನೇನೋ ಕೆಲಸದಲ್ಲಿ ತೊಡಗಿಕೊಂಡಳು ಆಕೆಯನ್ನು ಯಾರೂ ಮಾತನಾಡಿಸಲಿಲ್ಲ, ಆಕೆ ಯಾರೊಡನೂ ಮಾತನಾಡಲಿಲ್ಲ. ನಿಮಿಷ ನಿಮಿಷಕ್ಕೂ ಉರುಳುವ ಭೂಮಿ ಇತ್ತಿಂದತ್ತ ಹೊರಳಿತು ನಿರಂತರ ಗತಿಯ ಕಾಲವು ಸೂರ್ಯನನ್ನು ಅಸ್ತಕ್ಕೆ ಕಳೆಯಿತು.

ಕೇಶವಭಟ್ಟರು ರಾತ್ರಿ ತಡಮಾಡಿಯೇ ಬಂದರು. ಊಟ ಉಪಚಾರ ನೆಪಕ್ಕಾಯಿತು ಆ ಹೊತ್ತಿಗೆ ರಾಮಭಟ್ಟರು ಬಂದರು. ತಂದೆ ಮಕ್ಕಳ ಭೆಟ್ಟಿಯಾಯಿತು. ಮಗ ನಮಸ್ಕಾರ ಮಾಡಿದಾಗ ಭಟ್ಟರು ' ಶ್ರೀಹರೀ ಎಂದು ಕಣ್ಣೊರಸಿಕೊಂಡರು ರಾತ್ರಿ ಬಹಳಾ ಗಿತ್ತು. ಕೇಶವಭಟ್ಟರು ಅತ್ತಿತ್ತ ನೋಡಿ, ತಮಗಾಗಿ ಹಾಸಿದ ಹಾಸಿಗೆಯನ್ನು ಗುರುತಿಸಿ, ಅತ್ತ ನೇರಿದರು. ರಾಮಭಟ್ಟರ ಫಲ ಹಾರ ನಡೆದಾಗ ಯಜಮಾನಿತಿ ಹಗಲಿನ ಸುದ್ದಿಯನ್ನು ಏನೇನೋ ಹೇಳುತ್ತಿದ್ದಳು. ಸೊಸೆ ಅರೆಬೆದರಿಕೆಯ ಎಚ್ಚರದ ತೂಕಡಿಕೆಯಲ್ಲಿ ಅಡಕಲ ಕೋಣೆಯಲ್ಲಿದ್ದಳು. ಮನೆಕೆಲಸಮಾಡಿ ಅತ್ತೆ ಫಲಹಾರ ಮಾಡುವಾಗ ಸೊಸೆಯೂ ದಿನದೂಟ ಉಂಡಳು. ಆಕೆ ಕೈತೊಳೆ ದುಕೊಳ್ಳುತ್ತಿರುವಾಗ "ಕೇಶವನಿಗೆ ಕುಡಿಯುವ ನೀರಿನ ತಂಬಿಗೆ ಒಯ್ಯಿ ತಿಳಿಯಿತೇ" ಎಂದು ಹೇಳಿ ಅತ್ತೆ ಒಳಗೆ ಹೋದಳು. ಸೊಸೆ ಎಲ್ಲ ಪದಾರ್ಥ ಸಾವರಿಸಿ, ಕಿಟಕಿ ಬಾಗಿಲಗಳನ್ನು ನೋಡಿ

ದೇವರ ದೀಪಕ್ಕೆ ಇನ್ನೆರಡು ಸವಟು ಎಣ್ಣೆಹಾಕಿ, ದೀಪ ಸಣ್ಣದು ಮಾಡಿ, ಕುಲದೇವರಿಗೆ ಕೈಮುಗಿದು ಕುಳಿತಳು. ಆಕೆ ಎಚ್ಚೆತ್ತಾಗ ಓಣಿಯ ನಾಯಿಯೊಂದು ಬೊಗಳುತ್ತಿತ್ತು. ಎದ್ದವಳೇ ಆಕೆ ಕುಡಿಯುವ ನೀರಿನ ತಂಬಿಗೆ ಥಾಲಿಯನ್ನು ತಕ್ಕೊಂಡು ದಡಪಡಿಸಿ ಹೊರಟಳು. ಗಂಡನ ಗೋರಿಕೆ ಅವಳನ್ನು ಸ್ವಾಗತಿಸುತ್ತಿತ್ತು. ತಂಬಿಗೆಯಿಟ್ಟು ದೀಪ ದೊಡ್ಡದುಮಾಡಿ, ಆಕೆ ಮುಸುಕು ಬಿಗಿದು ಮಲಗಿದ ಯಜಮಾನರ ಕಾಲನೊತ್ತಲು ಕುಳಿತಳು.

ಆಕೆ ತೂಕಡಿಕೆಯಲ್ಲಿ ಎಷ್ಟು ಸಲ ಗಂಡನಿಗೆ ತಲೆಬಾಗಿಸಿದಳೋ, ಹೆದರಿ ತಲೆಯೆತ್ತಿ ಕಾಲನೊತ್ತಿದಳೋ; ಹಾಗೇ ಮರೆತು ಕಾಲಮೇಲೆ ತಲೆಯಿಟ್ಟು ಎಷ್ಟೊತ್ತು ನಿದ್ದೆಮಾಡಿದಳೋ. ಭಟ್ಟರ ಇನ್ನೊಂದು ಮಗ್ಗಲಿಗೆ ಹೊರಳಿದಾಗ ಆ ಸುಮಂಗಲೆಗೆ ಇನ್ನೊಂದು ಪಾದಸ್ಪರ್ಶವೂ ಆಯಿತು. ಆಕೆ ಅವನ್ನೂ ಒತ್ತಿದಳು. ಆಗೊಂದು ಕತ್ತೆ ನಿರರ್ಗಳವಾಗಿ ದಿಗಂತಗಳನ್ನು ಆಹ್ವಾನಿಸುವಂತೆ ಹ್ಯಾಂಕರಿಸುತ್ತಲೇ ಇತ್ತು. ನಿದ್ದೆಯಲ್ಲೋ, ಎಚ್ಚರದಲ್ಲೊ, ಭಟ್ಟರು "ಮುಟ್ಟಬೇಡ ಸರಿ" ಎಂದರು. ಆಕೆ ಬೆದರಿದಳು. ಮತ್ತೆ ಕಾಲೊತ್ತಲು ಕೈಚಾಚಿದಾಗ ಕಾಲು ಮಡಚಿಕೊಂಡವು. ಪಾದಗಳಿಗಾಗಿ ತಡವರಿಸಿದಾಗ ಅವು ತಪ್ಪಿಸಿ ಆಡಿದವು. ಆಕೆಗೆ ಯಮಾನರು ಎದ್ದು ಕುಳಿತಂತೆ ಎನಿಸಿತು. ಬೆಳಕಿಂಡಿಯಿಂದ ಇಳಿದು ಬೀಳುತ್ತಿದ್ದ ಬೆಳದಿಂಗಳ ಒಂದು ಬಿಂಬ ಪ್ರಕಾಶದಲ್ಲಿ ಆಕೆ ಕಣ್ಣರಳಿಸಿದಳು. ಕತ್ತಲೆಗೆ ಆಕಾರ ಬರಲಿಲ್ಲ. ಕೈ ಮುಗಿದು ಆಕೆ ನೆಲಕ್ಕೆ ತಲೆಯಿಟ್ಟಳು.

"ನೀನು ಶುದ್ಧಳೆ?" ಎಂದು ಪಿಸುಮಾತನ್ನೇ ಒತ್ತಿ ನುಡಿಸಿದಂತೆ ಒಂದು ಧ್ವನಿ ಬಂದಿತು. ಆಕೆ "ಇಲ್ಲ ನಾನು ಶುದ್ಧಳು" ಎಂದಾಗ ಗೋಡೆ ನಡುಗಿದವು. "ನೀನು ಯಾರನ್ನೂ ಮುಟ್ಟಿಲ್ಲವೆ?" ದನಿ ಸಿಡಿದು ಮಿಂಚಿತು "ದೇವರಾಣೆ" ಎಂದು ಆಕೆ ನಿಟ್ಟುಸಿರು ಬಿಟ್ಟಳು. "ಒಬ್ಬ ತಿರುಕನಿಗೆ" ಎಂದು ಆ ದನಿ ಎಂದಾಗ "ಅಯ್ಯೋ ಏನು ಮಾತಿದು" ಎಂದಿತು ಈ ಸ್ವರ. "ನಿನ್ನೆ ಹಾಳ

ಗುಡಿಯ ಬೈರಾಗಿಗೆ ನೀನು ಕೈ ಕೊಟ್ಟದ್ದು ನಾನು ನೋಡಿದ್ದೇನೆ" ಎಂದುದು ದಿಃಕ್ಕಾಸಿದಾಗ ಕತ್ತಲಲ್ಲಿ ಕರಗಿದಂತೆ ಈ ಸ್ವರ 'ಹಾಂ" ಎಂದಳಿದಿತು. ಆಕೆ ಸಾಷ್ಟಾಂಗ ಬಿದ್ದು ಗಂಡನ ಕಾಲಿಗೆ ನ್ಯೈಚಾಚಿ ದ್ದಳು. ಈ ಸವಾರಿ ಎದ್ದಿತು. ಬೈರಾಗಿತನಕ್ಕೆ ಮರುಳಾದವರಿಗೆ ಮನೆಯ ಹೆಂಗಸಿನ ಹಂಗೆ? "ನಾನು ತಂದೆತಾಯಿಯನ್ನು ಕಾಣಲು ಬಂದಿದ್ದೆ, ಈ ಹಾಳು ಮಾರಿಯನ್ನಲ್ಲ" ಎಂದವನನ್ನಲು ಆಕೆ ಗಲ್ಲ ಗಲ್ಲ ಬಡಿದುಕೊಂಡಳು. ವೇತಾಳ ತನ್ನ ಮಸಣಬಟ್ಟೆಗೆ ಹೊರ ಟಂತೆ, ಕೇಶವಭಟ್ಟರು ಕಾಲಪ್ಪಳಿಸುತ್ತ ಕೋಣೆಬಿಟ್ಟು ಮನೆಯ ಬಾಗಿಲು ಹೊರಗೆ ಹೊರಟುಹೋದರು.

ಈಕೆ ಹಾದಿ ನೋಡಿದಳು. ಬುದಿಂಗನೆದ್ದು ಬಾಗಿಲಿಗೆ ಬಂದಳು. ಓಣಿಯನ್ನು ಈ ತುದಿಯಿಂದ ಆ ತುದಿಗೆ ನಿಟ್ಟಿಸಿದಳು. ಎರಡು ಬೀಡಾಡಿ ನಾಯಿಗಳು ಇದಿರು ಬದಿರು ಕುಳಿತು ಚಂದ್ರನನ್ನು ನೋಡಿ ಅವನ ಬೆಳದಿಂಗಳಿನ ವ್ಯರ್ಥ ದುಂದುಗಾರಿಕೆಗಾಗಿಯೋ ಏನೋ ಭೋ ಎಂದು ಗೋಳಿಡುತ್ತಿದ್ದವು. ಈಕೆ ಹೆದರಿ ಕದ ಇಕ್ಕಿಕೊಂಡಳು; ತನ್ನ ಕೋಣೆ ಹೊಕ್ಕಳು. ಬರಿದಾದ ಹಾಸಿಗೆಯನ್ನು ಬೆಳಗಾಗುವ ವರೆಗೂ ತೊಯ್ಸಿ ತಪ್ಪಡಿ ಮಾಡಿದಳು.

ಮರುದಿನ ಊರೆಲ್ಲವೂ ಏಕಾಕಿನಿಯ ದುರ್ಭಾಗ್ಯಕ್ಕೆ ಹೆಸರಿಟ್ಟಿತು. ಅತ್ತೆ ಸೊಸೆಯನ್ನು ಶಪಿಸಿದಳು. ಮಾವ ಸೊಸೆಯ ನೀರು ಮುಟ್ಟಲಿಲ್ಲ. ತನ್ನ ಹಣೆಬರಹವನ್ನು ತೊಡೆದುಕೊಳ್ಳಲು ಅವನ್ನು ನೂರು ಸಲ ಅಪ್ಪಳಿಸಿಯೋ, ಸಾವಿರ ದೇವರಿಗೆ ನಮಿನಮಿಸಿಯೋ, ಅಂದು ಸಂಜೆಗೆ ಏಕಾಕಿನಿಯ ಹಣೆ ಬುಗುಟೆ ಬುಗುಟೆಯಾಗಿ ಗಂಟು ಕಟ್ಟಿತ್ತು. ಅವಳ ಸೌಭಾಗ್ಯದ ಕುರುಹಾಗಿ, ಅದನ್ನು ಅವಳ ಜೀವನಮಾನವಿದ್ದ ಕ್ಕುಳಿಯಿತು.



# ನಾಸ್ತಿಕ    

ನಾರಾಯಣರಾಯರು ನಿನ್ನೆಯೇ ತೀರಿಕೊಂಡರು. ಸ್ವರ್ಗ ವೈಕುಂಠ ಕೈಲಾಸ, ಪರಲೋಕ ಇವಾವ ಸ್ಥಳದೊಳಗಿನ 'ವಾಸಿಗಳು' ಅವರಾದರು ಎಂದು ಸಾರೆನ್ನಲಾರೆ. ಎನ್ನದಿರುವದೇ ವಾಸಿ. ನಾರಾಯಣರಾಯರಿಗೆ ಸ್ವತಃ ಇವಾವುಗಳಲ್ಲಿ ನಂಬಿಕೆಯಿರಲಿಲ್ಲ. ಬೇಕಾದರೆ ಅವರು ಜನರ ಹೃದಯವಾಸಿಗಳಾದರು, ಇತಿಹಾಸವಾಸಿಗಳಾದರು ಎನ್ನಬಹುದು. ರಾಯರನ್ನು ಯಾರು ಮರೆತಾರು? ಅವರು ಬಾಯಿಂದ ಎಂದೂ ಕೆಟ್ಟ ಮಾತನಾಡಲಿಲ್ಲ, ಅವರು ಕೈಯಿಂದ ಎಂದೂ ಪರಪೀಡೆಯ ಕಾರ್ಯ ಮಾಡಲಿಲ್ಲ. ದುಃಖಿತರಿಗೆ ನೆರವಾಗುವದರಲ್ಲಿಯೆ ಬಾಳು ಸಾರ್ಥಕವಾಗುವದೆಂದು ಅವರು ನಂಬಿದ್ದರು. ಹಾಗೆ ಅವರು ಬದುಕುಮಾಡಿದರು. ಅವರ ಅಂತ್ಯವಿಧಿಗೆ ಹೊಲೆ ಹದಿನೆಂಟು ಜಾತಿಯವರೂ ಇದ್ದರು. ಇಂಥವರು ಹುಟ್ಟಿದರೂ ಚಂದ, ಸತ್ತರೂ ಚಂದ, ಎನ್ನಬಹುದು. ಇವರು ತೀರಿಕೊಂಡರು ಎಂದಾದರೂ ಹೇಗೆನ್ನಬೇಕು? ಇವರು ಸಮಾಜಸೇವೆಗೆ ಪ್ರಾರಂಭಿಸಿದ ಸಂಸ್ಥೆಗಳೂ ಅದರಲ್ಲಿ ಕೆಲಸ ಮಾಡುವ ನಿಷ್ಠೆಯ ಹುಮ್ಮಸದ ತರುಣರೂ ಮುಂದೆ ಬಂದಿದ್ದಾರೆ. ಇವರು ಊರಿದ ವೃಕ್ಷಗಳಿಗೆ ಶಾಖೆಗಳಾಗುತ್ತಿವೆ. ಇವರಿಗೂ ಇಲ್ಲದ ಮಾತುಗಳನ್ನಾಡುವವರು ಇದ್ದಾರೆ. ಸತ್ತಮೇಲೆ ಆಡಿದ್ದಾರೆ, ಸಾಯುವಾಗಲೂ ಆಡಿದ್ದಾರೆ. ನಾರಾಯಣರಾಯ ಮತ್ತು ನಾಸ್ತಿಕ ಎಂಬ ಪದಗಳು

ಕೆಲವರಿಗೆ ಪರ್ಯಾಯ ಶಬ್ದಗಳಾಗಿದ್ದವು. ‘ ಇವರನ್ನೇನು ಸತ್ತ ಮೇಲೆ ಸುಡಬೇಕೋ ಹುಗಿಯಬೇಕೋ, ಮೊದಲೇ ಕೇಳಿಡಿರಿ” ಎಂದು ಒಬ್ಬ ಪುಣ್ಯಾತ್ಮರು ಮೊನ್ನೆ ಮೊನ್ನೆ ಸೂಚನೆ ಮಾಡಿದ್ದರು. ಒಬ್ಬ ಪಂಡಿತರು ರಾಯರು ಅಂಥ ಸ್ಥಿತಿಯಲ್ಲಿಯೂ ಅವರನ್ನು ಆ ಮಾತು ಮಹತ್ತ್ವದೆಂದು ಕೇಳಿಯೂ ಬಿಟ್ಟರು. ರಾಯರ ಉತ್ತರ ಸ್ವಾರಸ್ಯವಾಗಿತ್ತು. “ ಇವೆರಡೇ ಪ್ರಕಾರಗಳೇಕೆ ? ನೀರಲ್ಲಿ ದೇಹ ಚೆಲ್ಲಬಹುದು. ಆದರೆ ನೀರು ಕೆಟ್ಟಾವು ಅದು ಬೇಡ. ನಾಯಿ, ನರಿ ಹದ್ದು, ಕಾಗೆಗಳಿಗೂ ತಿನ್ನಗೊಡಬಹುದು. ಆದರೆ ಅದು ಕಣ್ಣಿಗೆ ಅಸಹ್ಯ ಕೊಳೆಯುವವರೆಗೂ ಜನರಿಗೆ ಕಾಟ. ಈಗ ಸಾಯುವ ಮೊದಲೇ ಯಾವದಾದರೂ ವೈದ್ಯಕೀಯ ಸಂಸ್ಥೆಗೆ ಕೊಟ್ಟುಬಿಡಿರಿ ನನ್ನ ದೇಹ, ಎಂದು ನಾನು ಹೇಳಬಹುದಾಗಿತ್ತು, ಅಂದರೆ ನನ್ನ ಮಿದುಳಿನ ಬಗ್ಗೆ ನನಗೇನು ದೊಡ್ಡ ಜಂಭವಿಲ್ಲ; ನನ್ನ ಅಸ್ಥಿ ಪಂಜ ರದಿಂದಾದರೂ ಶಿಕ್ಷಣಕ್ಕೆ ಸಹಾಯವಾದೀತೆಂದರೆ ಎಲುಬಿನಲ್ಲಿ ಏನೂ ಉಳಿದಿಲ್ಲ. ಸುಟ್ಟು ಸುಣ್ಣವಾಗಿದೆ. ಹುಗಿದಾದರೂ ನೆಲವನ್ನೇಕೆ ಅಡಗಾಣಿಸಬೇಕು ? ಸುಟ್ಟುಬಿಡಿರಿ, ಹೋಗಲಿ ಬೂದಿಯಾಗಿ, ಅಥವಾ ನಾನೇಕೆ ಅದನ್ನು ಹೇಳಲಿ ? ದೇಹ ಸಮಾಜದ್ದು, ಹತ್ತು ಜನರು ತಿಳಿದಂತೆ ಅದರ ವ್ಯವಸ್ಥೆ ಮಾಡಿರಿ ನಾನು ಬಿಟ್ಟು ಹೋದ ಮೇಲೆ. ನನ್ನ ಬುದ್ಧಿಯ ಕೈಯಲ್ಲಿ ಅದು ಸಿಕ್ಕಾಗ ಅದನ್ನು ಲೋಕ ಸೇವೆಗೆ ಸಾಕಷ್ಟು ದುಡಿಸಿದೆ. ಪಾಪ ! ಅದರಲ್ಲಿ ಬಹಳ ಸತ್ವವಿರ ಲಿಲ್ಲ ” ಎಂದರು. ಇಷ್ಟು ಹೇಳಲಿಕ್ಕೆ ಅವರಿಗೆ ಅರ್ಧತಾಸು ಹಿಡಿ ಯಿತು. ಹೇಳಿದ ಮೇಲೆ ಅವರಿಗೆ ದಮ್ಮು ಹತ್ತಿತು ಅವರು ಸತ್ತಂತೆ ಬಿದ್ದರು.

ಅವರು ಮಾಡಿದ ಕೆಲಸಗಳಿಗಲ್ಲ, ಅವರು ಮಾಡಿದ ಕೆಲಸ ಗಳಿಗಾಗಿ ಕೆಲಜನರು ಅವರಿಗೆ ಹೆಸರಿಡುತ್ತಿದ್ದರು ನಾರಾಯಣರಾ ಯರು ಹೊಸ ತಿಳಿವಳಿಕೆಗೆ ಬಂದ ಮೇಲೆ ಯಾವ ಗುಡಿಗೂ ಹೋಗ ಲಿಲ್ಲ, ರೂಢಿಯ ಬಲದಿಂದ ಕೂಡ ಅವರ ಬಾಯಿಗೆ ಬೇಸತ್ತಾಗ

ತಪ್ಪಿ ದೇವರ ಹೆಸರು ಬರಲಿಲ್ಲ. ಅವರು ತಮ್ಮ ತಾರುಣ್ಯದಲ್ಲಿ ಏನು ವಾದ-ಗೀದ ಮಾಡಿದ್ದರೋ ನಾನರಿಯೆ. "ದೇವರು ಇದ್ದಾನೆ, ಇಲ್ಲ" ಎಂದು ಅವರು ಎಂದೂ ತಾವಾಗಿ ವಾದ ಹೂಡಿದ್ದನ್ನು ನಾನು ನೋಡಲಿಲ್ಲ ಯಾರಾದರೂ ಕಾಲು ಕೆದರಿ ನ್ಯಾಯ ತೆಗೆಯುವವರಂತೆ "ನಾರಾಯಣರಾಯರೇ ನಿಮಗೆ ನಾರಾಯಣನೆಂದು ದೇವರ ಹೆಸರೇಕೆ ?" ಎಂದಂದರೆ, "ನಾರಾಯಣ ಎಂಬುವದು ಪ್ರಾಚೀನಕಾಲದ ಒಬ್ಬ ಒಳ್ಳೆಯ ಮನುಷ್ಯನ ಹೆಸರೇ ಅದು" ಎನ್ನುತ್ತಿದ್ದರು. "ಹಾಗಾದರೆ ನೀವು ದೇವರನ್ನು ಒಪ್ಪಿ ಕೊಳ್ಳುವದಿಲ್ಲವೊ ?" ಎಂದರೆ "ಆ ಮಾತಿನಿಂದ ನನಗಿನ್ನೂ ಯಾವ ತೊಡಕೂ ಬಂದಿಲ್ಲ, ಯಾವ ತೊಡಕೂ ಬಿಟ್ಟಿಲ್ಲ, ಆ ಹುಸಿ ಮಾತಿನ ಉಪಯೋಗವೇನು ?" ಎನ್ನುವರು. "ಕಾರಣವಿಲ್ಲದೆ ಜಗತ್ತು ಹುಟ್ಟಿದ್ದೀತೇ ?" ಎನ್ನುವವರಿಗೆ "ಅಕಾರಣವಾದಿ ನಾನೇನು ಅಲ್ಲ. ಆದರೆ ನೀವು ಹೇಳುವ ದೇವರೇ ಅದರ ಕಾರಣ ಎಂದು ಒಪ್ಪಿಕೊಂಡರೆ ಆಗುವ ಸಮಾಧಾನವೇನು ? ಇದ್ದ ಕಾರಣಗಳೆಲ್ಲ ನಮಗೆ ತಿಳಿದೇ ಬಿಟ್ಟಿವೆ ಎನ್ನುವ ಜಂಭ ನನಗಿಲ್ಲ ನನಗಿನ್ನೂ ಬಹಳೇ ತಿಳಿಯುವದಿದೆ" ಎಂದು ಹೇಳುವರು. ಒಮ್ಮೆ ಒಬ್ಬ ತತ್ವಜ್ಞಾನಾಚಾರ್ಯರು ಅವರಿಗೆ "ದೇವರು ಎಂದರೆ ಲೆಖ್ಖದೊಳಗಿನ 'ಕ್ಷ' ಇದ್ದಂತೆ. ಅದು ಎಲ್ಲದರ ಅಜ್ಞಾತ ಬೀಜ, ಅದರ ಬೆಲೆಗಳನ್ನು ನಾವು ಕಂಡು ಹಿಡಿಯಬೇಕಾಗಿದೆ." ಎಂದುವಾದಿಸಿದಾಗ "ನಾನು ಬಿಡಿಸುತ್ತಿದ್ದ ಲೆಖ್ಖ "ಜ್ಞ" ನದು "ಜ್ಞ" ನು "ಅ-ಜ್ಞ" ನಾಗಿ ತೋರಿದರೂ 'ಜ್ಞ' ನಾಗಿಯೇ ಪ್ರವರ್ತಿಸುವನು. ಈ ಎರಡು ಬೆಲೆಗಳ ಸಮೀಕರಣವನ್ನು ನಾನು ಬಿಡಿಸುತ್ತಿದ್ದೇನೆ." ಎಂಬ ಅವರ ಮಾತು ಕೇಳಿ ವಾದಿಗಳು ಕಕಮಕವಾಗುತಿದ್ದರು. "ದೇವರು ಇಲ್ಲದಿದ್ದರೆ ಪಾಪಿಗಳಿಗೆ ಗತಿಯಾರು ? ಸಂಸಾರದ ಕಷ್ಟ ಕೊನೆಗಾಣುವದೆಂತು" ಎಂದೊಬ್ಬ ಸಜ್ಜನರು ನಿಕರದ ಪ್ರಶ್ನೆ ಕೇಳಿದಾಗ ನಾರಾಯಣರಾಯರು "ಯಾವ ಕಷ್ಟ ಪಾಪಗಳೂ ಹಾಗೆ ಹಣೆಗೆ ಹೆಸರು ಬರೆದುಕೊಂಡು ಬಂದಿಲ್ಲ. ಈ ಧಾರಣಿ ವ್ಯವಹಾರಗಳೆಲ್ಲ ಮನುಷ್ಯ

ಜಾತಿ ನಿರ್ಮಿತ. ಇದರ ಪರಿಹಾರ ಮನುಷ್ಯ ಜಾತಿಯಿಂದಲೇ ಆಗ ಬೇಕು. ಕೂಸಿನ ಸಮಾಧಾನ ಮಾಡಲಿಕ್ಕಾಗದೆ ಬಾವಾನ ಬೆದರಿಕೆಹಾಕುವಂತೆ ತನ್ನ ಕುಚೋದ್ಯದ ಸೂತ್ರದ ಉರುಲನ್ನು ಯಾರದೋ ಕೊರಳಿಗೆ ಹಾಕುವ ದೌರ್ಜನ್ಯಕ್ಕಿಂತ ಹೆಚ್ಚಿನ ಬೇರೆ ದೌರ್ಬಲ್ಯವಾವುದೂ ಮನುಷ್ಯಜಾತಿಯಲ್ಲಿಲ್ಲ" ಎಂದು ಕಣ್ಣೀರು ತಂದು ಹೇಳಿದ್ದು ನನ್ನ ಕಣ್ಣೆದಿರು ಕಟ್ಟಿದೆ.

ಆದರೆ ಅವರಾಗಿ ಇಂಥ ವಿವಾದಗಳಿಗೆ ಬಾಯಿ ಎಂದೂ ಹಾಕುತ್ತಿದ್ದಿಲ್ಲ. ತಾವಾಯಿತು, ತಮ್ಮ ಕೆಲಸವಾಯಿತು ತಿಳಿದುಕೊಳ್ಳುವ ಹಂಬಲದಿಂದಲೇ ತಿಳಿವಳಿಕೆ ಬೆಳೆಯುವದು ಅಂತಃಕರಣ ಮಾಡವವರಿಂದಲೇ ಹೃದಯಕ್ಕ ಔದಾರ್ಯ ಬರುವದು ತಿಳುವಳಿಕೆಗೆ ಸರಿಯಾಗಿ ಇದ್ದು ನೋಡುವದರಿಂದಲೇ ಬಾಳಿನ ತಪ್ಪು-ಒಪ್ಪುಗಳ ತಿದ್ದುಪಡೆಯಾಗುವದು ಎಂದು ಅವರು ಯಾವಾಗಲೂ ಹೇಳಿ ಹಾಗೆ ದುಡಿಯುತ್ತಿದ್ದರು "ನಾರಾಯಣರಾಯರೇ, ನಿಮಗೆ ಜನರು ನಾಸ್ತಿಕರೆನ್ನುತ್ತಾರೆ" ಎಂದು ನಾನೊಮ್ಮೆ ಹೇಳಿದಾಗ ಅವರು "ಆಸ್ತಿಕತೆಯ ಅರ್ಥ ನನಗಾಗಿದ್ದರೆ ನಾನು ನಾಸ್ತಿಕತೆಗೆ ಬೆದರಬೇಕು "ಎಂದು ಉತ್ತರಕೊಟ್ಟರು. "ಅವರು ಶುದ್ಧ ನಾಸ್ತಿಕರು. ಹಳೆಯ ದೇವರೆಂದರೆ ಅವರಿಗೆ ಭರಷಣ. ದೇವರು ಬರತಕ್ಕವನೇ ಇದ್ದರ ಅವನು ಮನುಷ್ಯರ ಕುಲದಲ್ಲಿಯೇ ಹುಟ್ಟಿ ಬರಬೇಕು. ಮನುಷ್ಯನೆ ದೇವರ ಸೃಷ್ಟಿಕರ್ತ" ಎಂದು ಅವರು ಮತವಿದೆಯೆಂದು ನಾರಾಯಣರಾಯರ ತರುಣ ಅನುಯಾಯಿಗಳೊಬ್ಬರು ಯಾವಾಗಲೂ ಜನರೊಡನ ವಾದ ಹಾಕುತ್ತಿದ್ದರು. ನಾರಾಯಣರಾಯರಿಗೆ ಸನಾತನಿಗಳಲ್ಲಿ ಒಬ್ಬ ಬಲಮಿತ್ರರಿದ್ದರು. ರಾಯರ ಸ್ಮಶಾನಯಾತ್ರೆಗೆ ಬಂದ ಅನೇಕ ಜನರಲ್ಲಿ ಇವರೊಬ್ಬರೆ ಸನಾತನಿಗಳು. "ನಾರಾಯಣರಾಯ ಹೊಟ್ಟೆಯೊಳಗೆ ಆಸ್ತಿಕ ಇಟ್ಟಾದ ಸ್ತ ತೋರಿಸಿ ಕೊಡುವದಿಲ್ಲ." ಎಂದು ಅವರ ವಾದ ಗುಡೀಮನೆಯ ಆಚಾರ್ಯರು ಮಾತ್ರ "ಆ ಹೊಲೆಯನ ಕೃತೀ ಕಾಣಲಿಕ್ಕೆ ಚಂದ ತಾಮ್ಯಾ ಜೀವ! ಮೆತ್ತನ್ನ ರೀತಿಯಿಂದ ಕುಪ್ರವರ್ತನ ಮಾಡ

ಲಿಕ್ಕೆ ಬಂದಾನ ?" ಎನ್ನುತ್ತಿದ್ದರು.

ನಿನ್ನಿನ ಅವರ ಮರಣಪ್ರಸಂಗದಿಂದ ಈ ಮೂರು ಮತದವರಿಗೂ ತಮ್ಮ ತಮ್ಮ ಮತ ನಿಜವೆಂದು ಮತ್ತೊಮ್ಮೆ ಕೊನೆಯ ಮನಗಾಣಿಕೆಯಾಯಿತು. ರಾಯರಿಗೆ ಎರಡು ತಿಂಗಳಿಂದ ಮೈಯಲ್ಲಿ ಸರಿಯಾಗಿರಲಿಲ್ಲ. ಹದಿನೈದು ಇಪ್ಪತ್ತು ದಿವಸಗಳಂತೂ ಅವರು ಹಾಸಿಗೆ ಹಿಡಿದಿದ್ದರು. ಕೊನೆಯ ಎರಡು ಮೂರು ದಿನ ಅವರಿಗೆ ಆಗಾಗ ಸ್ಮೃತಿ ತಪ್ಪುತ್ತಿತ್ತು. ಎಲ್ಲ ಔಪದೋಪಚಾರ ನಡೆದಿತ್ತು. ರಾಯರ ಸನಾತನಿ ಬಾಲಮಿತ್ರ ಅವರಿಗೆ ದೇವರ ಅಂಗಾರ ಕೂಡ ಹಚ್ಚಿ ಹೋದ. ರಾಯರ ತರುಣ ಅನುಯಾಯಿ ಅದನ್ನು ತೊಡೆದು ಹೋದ. ರಾಯರೂ ತಮ್ಮ ಕೊನೆಗಾಲ ಬಂತೆಂದೇ ತಿಳಿದಿದ್ದರು. ರಾಯರ ದಮ್ಮಿನ ಕಷ್ಟ ನೋಡಲಾರದೆ ಬೇನೆಯೊಳಗಿಂದಾಗಲಿ ಜನ್ಮದೊಳಗಿಂದಾಗಲಿ ರಾಯರು ಪಾರಾದರೆ ಒಳಿತೆಂದು ನಮ್ಮೆಲ್ಲರಿಗೂ ಎನಿಸಿತು. ಮತ್ತೆ ಅವರು ಕೈಕಾಲಾಡಿಸಹತ್ತಿದರು. ಸಂಕಟಪಡಹತ್ತಿದರು. ನಮಗೆ ಸಂಕಟವಾಗಹತ್ತಿತು. ಅವರ ಆಶೆ ಏನಾದರೂ ಉಳಿದಿರಬಹುದೇನೋ ಎಂದು ಕೆಲವರು ವಿಚಾರ ತೆಗೆದರು. ನಾನೊಂದಿಷ್ಟು ಅದಕ್ಕೆ ಒಪ್ಪಲಿಲ್ಲ. ಅವರೂ ಇವರೂ ಬಂದು ರಾಯರಿಗೆ ಏನೇನೋ ವಚನ ಕೊಟ್ಟರು. ದತ್ತಕಮಾಡಿಕೊಳ್ಳುವ ವಿಚಾರವೇನಾದರು ಇರಬಹುದೋ ಎಂದೂ ಒಬ್ಬರಿಗೆ ಸಂಶಯ ಬರದೆ ಹೋಗಲಿಲ್ಲ. ಅವರು ಹಾಗೆ ಕೇಳಿಯೂ ಬಿಟ್ಟರು. ರಾಯರು ಎಲ್ಲರ ಕಡೆಗೂ ಕೈಮಾಡಿದರು "ನೀವೆ ನನ್ನ ಸಂತತಿ" ಎಂದು ಅವರ ಅರ್ಥವಿರಬೇಕು. ಅದೇನೆ ಇರಲಿ, ರಾಯರಿಗೆ ಮುಕ್ತಾಯವಾಗಲೊಲ್ಲದು. "ಇಂಥ ಒಳ್ಳೇ ಜೀವಕ್ಕೆ ಇಷ್ಟು ಕಷ್ಟದ ಮರಣ ಬರಬಾರದಾಗಿತ್ತು" ಎಂದು ಕೆಲವರೆಂದರು. 'ಎಂಥ ಜೀವನವೋ ಅಂಥ ಮರಣ" ವೆಂದು ಆಚಾರ್ಯರ, ಓಣಿಯಿಂದ ಆಕಾಶವಾಣಿ ಬಂತು. ಅವರ ಅರ್ಥವೇನೋ ಅವರ ದೇವರೇಬಲ್ಲ; "ಕೊನೆಗಾಲಕ್ಕಾದರೂ ದೇವರ ಹೆಸರು ತಗೊಳ್ಳಲಿಕ್ಕೆ ಹೇಳಿರಿ. ಎಂದೂ ಅಲ್ಲಿಂದ ಹಿತಸೂಚನೆ ಬಂತು. ಇವ

ರಾಯರ ಅಸ್ತಿಕ್ಯ ನಾಸ್ತಿಕ್ಯವಾದ ದೇವರ ಆಸ್ತಿಕ್ಯ ನಾಸ್ತಿಕ್ಯದಷ್ಟೇ ವ್ಯರ್ಥವಾದ ವಾದವು. ರಾಯರ ಬಾಳು ವ್ಯರ್ಥವೆಂದು ಅವರಶ್ನರಿತವರಾರೂ ಹೇಳಲಾರರು. ಆದರೆ ತಮಗೆ ಇದೆಯೆಂದು ತೋರಿದ್ದೇ ಆಸ್ತಿಕ್ಯವೆನ್ನುವ ನಾಸ್ತಿಕ ರೋಗಿಗಳಿಗೆ ಮಾತ್ರ ಅವರ ಜೀವನವೂ ಮದ್ದಾಗಲಿಲ್ಲ.



# ಮಂಗಾಟ • • • •

ವರ್ಷವರ್ಷವೂ ನಮ್ಮಣ್ಣನೆ ಹಳ್ಳಿಗೆ ಹೋಗಿ ಹೊಲದ ಹಣ ವಸೂಲು ಮಾಡಿಕೊಂಡು ಬರುತ್ತಿದ್ದ. ಈ ವರ್ಷ ಅವನ ಮೈ ಯ್ಯಲ್ಲಿ ಸರಿಯಾಗಿರಲಿಲ್ಲ. ಒಂದೆರಡು ತಿಂಗಳಿಂದ ಕಾಯಿಲೆ. ನಾನೇ ಹೋಗಬೇಕಾಗಿ ಬಂತು. ವೆಂಕಟರಾಯರ ಪರಿಚಯ ನನಗೆ ಪೂರ್ಣವಾಗಿ ಇತ್ತು. ಅವನು ನಮ್ಮ ಮನೆಯಲ್ಲಿಯೇ ಸಾಲೆ ಓದಲು ಇದ್ದ ನಮ್ಮ ಅಣ್ಣನ ಓರಿಗೆಯವನವನು. ಮುಂದೆ ಅವರ ತಂದೆಯವರು ತೀರಿಕೊಂಡ ಕೂಡಲೇ ಓದು ಅರ್ಧಕ್ಕೆ ಬಿಟ್ಟು ಅವನು ತಮ್ಮ ಹಳ್ಳಿಗೆ ಹೋಗಬೇಕಾಯಿತು. ನಮ್ಮ ಅಣ್ಣ ಅವರ ಹಳ್ಳಿಗೆ ಪ್ರತಿವರ್ಷ ಹೋಗಿ ಬಂದಾಗ ಅವನ ಸಮಾಚಾರ ತಿಳಿ ಯುತ್ತಿತ್ತು. ಈಗ ಅವನ ಮದುವೆಯಾಗಿ ಅವನಿಗೆ ಒಬ್ಬ ಮಗ ನಿದ್ದ. ಆ ಹುಡುಗನಿಗೂ ನಮ್ಮ ಸುದ್ದಿಯೆಲ್ಲವೂ ಗೊತ್ತಿತ್ತಂತೆ ವೆಂಕಟರಾಯ ಕೇಳುವದಿರಲಿ, ಅವನ ಮಗನೂ 'ಸಣ್ಣಕಾಕಾ ಯಾವಾಗ ಬರತಾನ ನಮ್ಮನೀಗೆ ?' ಎಂದು ನಮ್ಮಣ್ಣನನ್ನು ಕೇಳು ತ್ತಿದ್ದನಂತೆ. ನನಗೋ ಹಳ್ಳಿಯೆಂದರೆ ಬೇಸರು ಆದರೆ ಈ ವರ್ಷ ಮಾತ್ರ 'ಸಣ್ಣಕಾಕಾ' ಹಳ್ಳಿಗೆ ಹೋಗುವ ಸರತಿ ಬಂತು. ಹಣಕಾಸು ಕೈಗೆ ಬರದಿದ್ದರೆ ಹೊಟ್ಟೆಯ ಪಾಡೇನು ? ಆದರೂ ನಾನು ವೆಂಕಟರಾಯ ನನ್ನೂ ಅವನ ಮಗನನ್ನೂ ಒಮ್ಮೆ ನೋಡಿ ಬರಲಿಕ್ಕಾದರೂ ಹಳ್ಳಿಗೆ ಹೋಗೋಣ ಎಂದು ದೊಡ್ಡಸ್ತಿಕೆಯ ಸಮಾಧಾನ ಹಚ್ಚಿ ಕೊಂಡೆ.

ನಾನು ವೆಂಕಟರಾಯನ ಹಳ್ಳಿಗೆ ಹೋಗಿ ಒಬ್ಬಿಬ್ಬರನ್ನು ಕೇಳಿ ಅವರ ಮನೆಗೆ ಮುಟ್ಟುವ ಹೊತ್ತಿಗೆ ವೆಂಕಟರಾಯ ಮನೆಯಲ್ಲಿರಲಿಲ್ಲ. "ವೆಂಕಟರಾಯರು ಇದ್ದಾರೇನು ಮನಿಯೊಳಗ ?" ಎಂದು ನಾನು ಕೂಗಿದಾಗ ಆರೇಳು ವರ್ಷದ ಹುಡುಗನೊಬ್ಬನು ಓಡಿ ಬಂದು ನನ

ಮುಖ ನೋಡಿ ಬಾ, ''ಕಾಕಾ'' ಎಂದು ಕೈ ಹಿಡಿಯಲು ಬಂದು ''ಬ್ರ್ರ ಕಾಕಾ'' ಎಂದು ಹಿಂದೆ ಸರಿದು ಮಿಳಮಿಳನೆ ಮುಖ ನೋಡುತ್ತ ನಿಂತನು. ನಾನು ರೈತರ ಮೇಲೆ ಸ್ವಲ್ಪ ದರ್ಪವಿರಲಿ ಎಂದು ಹ್ಯಾಟು, ಪ್ಯಾಂಟು, ಬೂಟು ಹಾಕಿಕೊಂಡು ಬಂದಿದ್ದೆ. ''ಆಹಾ! ಕಾಕಾ ಸಾಹೇಬಾಗಿ ಬಂದಾನ! ಹ್ಯಾಂಗ ಗುರುತು ಹಿಡದ ?'' ಎನ್ನುತ್ತ ಕಾಲಿಗೆ ಬಂದು ಹಿಂದೆ ಸರಿದಿದ್ದ ಹುಡುಗನು ಅಪ್ಪಿಕೊಂಡನು ನಾನು ನಕ್ಕೆ. ಆ ನಗೆ ಅವನಿಗೆ ಹೊಸದು ಎನಿಸಿರಬೇಕು ಅವನು ಸಶಂಕನಾಗಿ ಹಿಂದೆ ಸರಿದ. ಹುಡುಗನು ಈ ತೊಡಕಿನಲ್ಲಿ ಬಿದ್ದದ್ದು ಆಶ್ಚರ್ಯವಲ್ಲ ನನಗೂ ನನ್ನ ಅಣ್ಣನಿಗೂ ಮುಖದಲ್ಲಿ ಬಹಳೇ ಹೋಲಿಕೆ ಇತ್ತು ಅವನು ನನಗಿಂತ ಗಡುತರ, ಎತ್ತರವಂತೂ ಸರಿಯೆ, ನನಗಿಂತ ಕಪ್ಪು ಆದರೆ ಮುಖ ಒಂದೇ ಪಡಿಯಚ್ಚು

''ಅಪ್ಪಾ! ಹೊರಗೆ ಬಾರವ್ವಾ ಅಪ್ಪಾ! ದೊಡ್ಡ ಕಾಕಾಸಂಧನರು ಯಾರೋ ಕಾಕಾ ಬಂದಾರ!' ಎಂದು ಹುಡುಗ ಒಳಗೆ ಓಡಿದ ಮೊದಲಿನ ಚೀರಾಟ ಈಗಿನ ಕೂಗಾಟ ಕೇಳಿ ಒಳಗಿನಿಂದ ವೆಂಕಟರಾಯರ ದಂಪತಿ (ಮತ್ತೆ ಬೇರೆ ಯಾರಿರಬಹುದು) ನಡುಮನೆಗೆ ಬಂದು ನನ್ನನ್ನು ಇಣಿಕಿ ನೋಡಿ, ನಮ್ಮಣ್ಣನ ಸಾದೃಶ್ಯದಿಂದಲೂ ಊಹೆಯಿಂದಲೂ, ನಾವು ಹಳ್ಳಿಗೆ ಬರುವ ದಿವಸಗಳೇ ಅವು ಆಗಿರುವುದರಿಂದಲೂ, ನಾನು ನಾನೇ ಎಂದು ಹೇಗೋ ಗೊತ್ತುಮಾಡಿಕೊಂಡು ''ಶಿದ್ದಾ ರಾಯರ ಸಾಮಾನು ಒಳಗಿಡು, ಒಳಗಿನ ಕುರ್ಚಿ ಹೊರಗಿಡು'' ಎಂದು ಹೇಳಿದರು ವೆಂಕಟರಾಯನ ಹುಡುಗನಿಗೆ ಇನ್ನೂ ದಿಗಿಲು ಬಿಡಲೊಲ್ಲದು ''ಅವ್ವಾ, ಕಾಕಾ ಸಾಹೇಬಾಗ್ಯಾನ ಅಂತ ಬೆಳ್ಳಗಾಗ್ಯಾನೇನವ್ವ, ಅವ್ವಾ ?'' ಎಂದು ನನ್ನ ಮುಖದ ಕಡೆಗೊಮ್ಮೆ ತಮ್ಮ ತಾಯಿಯ ಮುಖದ ಕಡೆಗೊಮ್ಮೆ ನೋಡುತ್ತ ತನ್ನ ತರ್ಕವನ್ನೆಸೆದ ಪಾಪ! ''ಅವರು ಸಣ್ಣ ಕಾಕಾ ! ಅವರಿಗೆ ಕೂಡಲಿಕ್ಕೆ ಹೇಳು'' ಎಂದು ಹೇಳಿ ಅವರು ಅಡಿಗೆ ಮನೆಯ ಕಡೆಗೆ ಹೊರಟದ್ದೇ ತಡ, ವೆಂಕಟರಾ

ಯುನ ಮಗ ನನ್ನ ಕಡೆಗೆ ಓಡಿಬಂದು ‘ ಸಣ್ಣಕಾಕಾ ಸಣ್ಣಕಾಕಾ ಬರತೇನಿ ಬರತೇನಿ ಅಂತ ಇಂವ ಬಂದೇನವಾ ಸಣ್ಣಕಾಕಾ?’ ಎಂದು ಎಂದು ಸವಾಲು ಹಾಕಿದ. ಅಷ್ಟರಲ್ಲಿ ಸಿದ್ಧ ನನ್ನ ಸಾಮಾನು ಒಳಗಿಟ್ಟು ಒಳಗಿನ ಖುರ್ಚಿಯನ್ನು ಹೊರಗೆ ತಂದಿಟ್ಟಿದ್ದ ನಾನು ನನ್ನ ಸಾಹೇಬನ ವೇಷ ತೆಗೆದು ಸಾದಾ ಉಡಿಗೆಯಿಂದ ಕುರ್ಚಿ ಮೇಲೆ ಕೂಡಲು ಸಿದ್ಧತೆ ನಡೆಸಿದ್ದೆ.

ವೆಂಕಟರಾಯನ ಮಗ ನನ್ನನ್ನು ಕಾಲನಿಂದ ತುದಿಯವರೆಗೊನ್ಮೆ ನೋಡಿ ‘ ಸಣ್ಣಕಾಕಾ, ನಂದೂ ಸಾಹೇಬರ ಕೋಟು, ಸಾಹೇಬರ ಟೊಪಿಗಿ, ಸಾಹೇಬರ ಚಣ್ಣ ಅದ ಸಾಹೇಬರ ಬೂಟ ಅದ, ಸಾಹೇಬರ ಒಣ್ಣಾನೂ ತಂದಾನ ಅಪ್ಪ! ಹೋಳಿ ಹಬ್ಬದ ದಿವಸ ಹಚ್ಚಿಕೋತೇನಲ್ಲ’ ಎಂದು ಪುರಾಣ ಬಿಚ್ಚಿದ ಅಷ್ಟೊತ್ತಿಗೆ ನಾನು ಕುರ್ಚಿಯ ಮೇಲೆ ಕೂತು ಆ ಮುದ್ದು ಮುದ್ದ ಮಾತಾಡುವ ತುಂಟನನ್ನು ಮಿಕಿ ಮಿಕಿ ನೋಡುತ್ತಿದ್ದೆ. ಅವನು ಚಟ್ಟನೆ ಹತ್ತಿರ ಬಂದು ನನ್ನ ಗಲ್ಲವನ್ನು ತನ್ನ ಪುಟ್ಟ ಕೈಯಿಂದ ತಿಕ್ಕಿ ‘ನಿನ್ನ ಒಣ್ಣ ಎಷ್ಟು ಗಟ್ಟಿ ಅದsನೋ ಸಣ್ಣಕಾಕಾ? ಒರಸಿದರ ಹೋಗುವದss ಇಲ್ಲ ಅಲಾವೀ ಹುಲೀ ಹಾಂಗ ಗಟ್ಟ್ಯಾದ ನಿನ್ನ ಬಣ್ಣ!’ ಎಂದು ತನ್ನ ಕಂದಾದ ಬೆರಳುಗಳನ್ನೂ ನನ್ನ ಕೆಂಪಾದ ಗಲ್ಲವನ್ನೂ ಜರಗಿನಿಂದ ನೋಡಿ ನೋಡಿ ಪಿಸಿ ಪಿಸಿ ನಕ್ಕ ಡೋಣಿಸಾಲಿನ ಈ ಹುಡುಗನ ಕಲ್ಪನೆ ನೋಡಿ ನನಗೆ ನಗೆ ಬಂತು ಅವನು ತಾನು ನೋಡಿದ ಕಂಪ್ರು ಜನರು ಬಣ್ಣ ಹಚ್ಚಿಕೊಂಡವರೇ ಇರಬೇಕೆಂದು ಕಲ್ಪನೆ ಕಟ್ಟಿಕೊಂಡಿರಬೇಕು

ಇಷ್ಟರಲ್ಲಿ ಆ ತುಂಟನ ಕಲ್ಪನೆ ಬೇರೆ ಕಡೆಗೆ ಹೊರಳಿತು ನಾನು ಪಡಸಾಲೆಯಲ್ಲಿ ಗೋಡೆಗೆ ಅಂದ ಚಂದಕ್ಕಾಗಿ ತೂಗು ಹಾಕಿದ ಚಿತ್ರಪಟಗಳನ್ನೂ ಉಳಿದ ಓರಣವನ್ನೂ ಸಹಜ ನೋಡತೊಡಗಿದಾಗ ನನ್ನ ಬೆನ್ನು ಹಿಂದಿನಿಂದ ಕುರ್ಚಿ ಹತ್ತಿ ನನ್ನ ತಲೆ ಹಿಡಿದು ಚಟ್ಟನೆ ಹೆಗಲೇರಿ ನಿಂತು ಚಪ್ಪಳೆ ಹೊಡೆದು ‘ನನಗೆ ಸರ್ಕಸ ಬರತ್ತದಪ್ಪಾ ಸಣ್ಣಕಾಕಾ! ಹೆದರಬ್ಯಾಡಾ’ ಎಂದು ನನಗೆ

ಧೈರ್ಯ ಹೇಳುತ್ತಿದ್ದ ಆ ತುಂಟ. ನನಗೆ ನಿಜವಾಗಿಯೂ ಹೆದರಿಕೆ ಬಂದಿತ್ತು. ನನಗೆ ಹುಡುಗರನ್ನು ಹೇಗೆ ಆಡಿಸಿ ಗೊತ್ತಿರಲಿಲ್ಲ. ಅವನೆಲ್ಲಿ ಬೀಳುವನೋ, ನಾನೆಲ್ಲಿ ಕೆಡಹಿದಂತಾಗುವದೋ ಎಂದು ದಂಗು ಬಡೆದು ಹೇಗೋ ಅಲುಗಾಡದೇ ಕುಳಿತಿದ್ದೆ.

ಅಷ್ಟರಲ್ಲಿ ವೆಂಕಟರಾಯ ಬಂದ. ನಾನು ನೋಡಿದೊಡನೆ ಗುರುತು ಹಿಡಿದೆ. ಅವನಲ್ಲಿ ಏನೂ ಬದಲಾಗಿರಲಿಲ್ಲ. ವಯಸ್ಸು ಹೆಚ್ಚಾಗಿತ್ತು, ಆಕಾರ ದೊಡ್ಡದಾಗಿತ್ತು. ಅವನು ಬಂದವನೇ ಮಗನಿಗೆ 'ಏ ಮಂಗಾ ತೆಳಗಿಳಿ ಯಾರ ಬೆನ್ನು ಹತ್ತೀ!' ಎಂದ. ನನ್ನನ್ನು ಒಂದು ನಿಮಿಷ ನೋಡಿ 'ಓಹೋ ಭೀಮರಾಯ.ರ ಅಪರೂಪ ಸವಾರಿ ಯಾವಾಗ ಬಂತು ?' ಎಂದ. ಭೀಮರಾಯ ಅಂತ ಭೀಮರಾಯ! ಅಂವಾ ಸಂಣಕಾಕಾನಪ್ಪಾ ಅಪ್ಪಾ, ನಮ್ಮ ದೊಡ್ಡ ಕಾಕಾನ ಮಗಾ ಸಣ್ಣಕಾಕಾ. ನಾ ಕೂಡ ಗುರ್ತ ಹಿಡದೆ. ನೋಡಪ್ಪಾ ಅಪ್ಪಾ ಸಾಹೇಬರ ಸೋಗು ಹಾಕ್ಕೊಂಡು ಬಂದಿದ್ದಾ ಸಣ್ಣಕಾಕಾ. ಅಪ್ಪಾ ಸಾಹೇಬರ ಟೊಪಗೀ ಕೊಡಪ್ಪಾ ನಂದೂ ನಾನೂ ಸಣ್ಣಕಾಕಾನ ಕೂಡ ಸಣ್ಣ ಸಾಹೇಬ ಆಗ್ತೇನಿ' ಎಂದು ತನ್ನ ಅಸಂಬದ್ಧ ಸುಸಂಬದ್ಧ ವಾಗ್ಧೋರಣೆಯನ್ನು ಸಾಗಿಸುತ್ತ ತನ್ನ ತಂದೆಯ ಟೊಂಕಕ್ಕೆ ಅಪ್ಪಿ ಜೋತುಬಿದ್ದ. 'ಮಂದೀ ಇದುರಿಗೆ ಹೀಂಗ ಮಂಗನಾಂಗ ಮಾಡಬಾರದು ಸರಿ' ಎಂದು ತಂದೆ ಹೇಳಿದರೂ 'ಸಣ್ಣಕಾಕಾ ಮಂದಿಯೇನಪಾ ಅಪಾ ? ಅಂವಾ ನಮ್ಮ ಸಣ್ಣಕಾಕಾ. ಅಪ್ಪಾ, ಸಣ್ಣಕಾಕಾನ ಹತ್ತರ ನಾ ಈವತ್ತ ಊಟಕ್ಕ ಕೂಡಾವ ಅಪ್ಪಾ.'

ನನಗೆ ಆ ಸಣ್ಣ ತುಂಟನ ಸಲಿಗೆ, ಅಗತ್ಯ, ಚಂಚಲತೆ, ಚಮತ್ಕಾರ ನೋಡಿ ಮುದ್ದು ಬಂತು. ಸಣ್ಣ ಹುಡುಗ, ದುಂಡು ಮುಖ, ದೊಡ್ಡ ಕಣ್ಣು, ಉದ್ದ ಮೂಗು, ಬಣ್ಣ ಕಪ್ಪಗಿದ್ದರೂ ಸತೇಜವಾದ ಗಟ್ಟಿ ಕಲ್ಲಿನಂಥ ಮೈ. ಕಿವಿಯ ಬದಿಗೆ ಗಲ್ಲದ ಮೇಲೆ ಚಿವುರುಗಾಯದ ಕಲೆಗಳಿದ್ದವು. ಪರಿಚಯವಿಲ್ಲದವರಿಗೆ ಗಾಯಗೊಂಡ ಗಲ್ಲದ ಪಕ್ಕದಿಂದ ಅವನ ಮುಖ ಹೇಗೆ ತೋರುತ್ತಿತ್ತೋ! ನನಗೆ ಅದು ಆ

ಹುಡುಗನ ಶೌರ್ಯದ ಚಿಹ್ನವಾಗಿ ತೋರಿತು. ನಾನು ಕೌತುಕ ದಿಂದ ಅವನನ್ನು ಹತ್ತಿರ ಎಳೆದುಕೊಂಡು ಗಲ್ಲದ ಮೇಲೆ ಕೈಯಾಡಿಸಿ ‘ ಇದೇನಾಗಿದೆ ಇದು ಗಲ್ಲದ ಮೇಲೆ ? ’ ಎಂದು ಕುತೂಹಲದಿಂದ ವೆಂಕಟರಾಯನನ್ನು ಕೇಳಿದೆ. ‘ ಇದು ಈ ಮಂಗನ ಮುಂಗಾಟ ’ ಎಂದು ಮಗನ ಗಲ್ಲ ತಿವಿದರು. ಆ ಹುಡುಗ ಸುಮ್ಮನೆ ಕೂಡತಕ್ಕವನೆ? ‘ ಆ ಮಂಗ ಕೈಯಾಗ ಸಿಕ್ಕಿದ್ದರೆ ಕೊಂದು ಬಿಡುತ್ತಿದ್ದೆ. ಯಾಕs ತರಲೇನು ಬಂದೂಕು ? ’ ಎಂದವನೆ ನನ್ನ ಕೈ ಬಿಡಿಸಿಕೊಂಡು ನಡು ಮನೆಗೆ ಓಡಿದ.

“ ಮುಂಗಾಟ ಏನು ? ” ಎಂದು ನಾನು ಬೆಳೆಬೆಳೆವ ಲವಲಕೆ ಯಿಂದ ಕೇಳಿದೆ.

“ ಅದೊಂದು ಕಥೀನs ಅದ. ಜೀವನದ ಮ್ಯಾಲೆ ಬಂದದು ಬಾಲದ ಮ್ಯಾಲೆ ಹೋತು ” ಎಂದರು.

ನಾನು ಆ ಹಳ್ಳಿಗೆ ಆ ಕತೆ ಕೇಳಲಿಕ್ಕೆ ಬಂದವರಂತೆ ಉಳಿದ ಮಾತು ಬಿಟ್ಟು “ ಏನು ಆ ಕಥೀ ? ” ಎಂದೆ.

“ ಹತ್ತು ಜನರಿಗೆ ಹತ್ತು ಸಲ ಹೇಳಿದ್ದೇನೆ. ಮತ್ತ ಒಮ್ಮೆ ಹೇಳುತ್ತೇನೆ. ಅದಿರಲಿ, ನಿಮ್ಮಣ್ಣ ಯಾಕೆ ಬರಲಿಲ್ಲಾ? ನೀ ಬಂದದ್ದೂ ನೆಟಗs ಆತು. ನಾವೂ ನೀವೂ ನೋಡದs ಎಂಟು ವರ್ಷ ಆಗಿ ದ್ದೀತಲs ? ”

‘ ಹೌದು, ಹತ್ತೊಂಬತ್ತುನೂರಾ ಹನ್ನೆರಡು ಅಂದೆ ”

ವೆಂಕಟರಾಯನ ಕಣ್ಣಿಗೆ ನೀರು ಬಂತು. ‘ ನಡೀರಿ , ಕೈಕಾಲು ಆಗಲಿ. ಒಳಗೆ ಚಹಾ ಆಗಿರಬೇಕು ’ ಎಂದು ನಡುಮನೆಯ ಕಡೆಗೆ ನೋಡಿ ಎಂದ. ನಾನು ಎದ್ದು ಒಳಗೆ ಹೊರಟೆ. ಆಗ ಆ ತುಂಟ ಒಮ್ಮೆಲೆ ನನ್ನೆದುರು ಬಂದು ನನಗೆ ಗುರಿಯಿಟ್ಟು “ಹೆದರ ಬ್ಯಾಡ ಸಣ್ಣ ಕಾಕಾ, ಇದು ಗಾಳಿ - ಬಂದೂಕು ” ಎಂದ. ಅವನ ಕೈಯಲ್ಲಿ ಒಂದು ಆಟದ ಬಂದೂಕು ಇತ್ತು. ನಾನು ಸುಳ್ಳೇ ಹೆದರಿದಂತೆ ಮಾಡಿದೆ. ಅವನು ಬಿದ್ದು ಬಿದ್ದು ನಕ್ಕ. “ ಸಾಹೇ ಬರು ಹೆದರತಾರೇನಪಾ ಅಪ್ಪಾ ? ” ಎಂದು ದೊಡ್ಡ ಪ್ರಶ್ನೆಮಾ

ಕೆಲವರು ಹಾಲು ತಗೋತಾರ. ಇವನಿಗೂ ಹಾಲಿನ ಜೋಡೀ ಫರಾಳ, ಯಾರಿತಗೊಂಡ ಸರತಿಗೊಮ್ಮೆ ನಡೆದಿತ್ತು. ಇವನ ಕಣ್ಣೆದುರಿಗೇ ಬಣ್ಣಾ ಬಳಿದುಕೊಂಡು ಮನುಷ್ಯರು ಹುಲಿ ಯಾಗುತ್ತಿದ್ದರು. ಬಣ್ಣದ ಮೈ ನೋಡಿ ಭಯವಾಗಲಿಕ್ಕಿಲ್ಲ. ಆದರೂ ಕೆಲವರ ಹುಲಿಬಣ್ಣದ ಮುಖ ನೋಡಿ ಒಮ್ಮೊಮ್ಮೆ ದೊಡ್ಡವರಿಗೂ ಹಿಂದೆ ಸರಿಯುವಂತೆ ಆಗುತ್ತದೆ. ಇವನಿಗೇನೂ ಇಲ್ಲ ಇವನು ಹುಲಿಯಾದವರ ಕಣ್ಣಲ್ಲಿ ನಿಟ್ಟಿಸಿ ನೋಡಿ ಅವರಿಗೇ ಬೆದರಿಸುತ್ತಿದ್ದ. ಅವರು ನಾಲಿಗೆ ಹಿರಿದರೆ ಇವನು ಎರಡು ಬೆರಳುಗಳಿಂದಲೂ ತನ್ನ ತುಟಿ – ಗಲ್ಲ ಹಿಗ್ಗಿಸಿ ನಾಲಿಗೆ ನೀಡಿ " ಸೀಇಾ ಬಂತು ಎಂದು ತಿರುಗಿ ಮೇಲೇರಿ ಹೋಗುತಿದ್ದ ಇವನು ಚಿತ್ರದ ಹುಲಿ ಸಿಂಹಗಳನ್ನೂ ನೋಡಿದ್ದಿಲ್ಲ. ಆದರೆ ಇವನಿಗೆ ಹುಲಿ ಸಿಂಹ ಎಂದರೆ ಕಃಪದಾರ್ಥವಾಯಿತು. ವುಧ್ಯನ್ಹ ಹುಲಿಯು ಬಾಲ ಹಿಡಿದ, ಹುಲಿಯು ಟೊಪ್ಪಿಗೆ ಹಾಕಿಕೊಂಡ, ಹುಲಿಯು ಚಾಳೀಸು ಹಚ್ಚಿಕೊಂಡು ನೋಡಿದ, ಹುಲಿಯು ಕೂಡಾ ಕುಣಿದ, ಹುಲಿಯುಗುರಿನಿಂದ ತಾನು ಚಿವುರಿಕೊಂಡ, ಮುಂದಿಗೆ ಚಿವುರಿದ. ಸಂಜೆಗೆ ಮನೆಗೆ ಬಂದಾಗ ಅವನ ಕಿವಿಯಲ್ಲಿ ಹುಲಿ - ಹಲಿಗೆ ಬಾರಿಸುತಿತ್ತು; ಮೈಯಲ್ಲಿ ಹುಲಿ ಬಂದಿತ್ತು, ಕೈಕಾಲು ಹುಲಿ - ಗತ್ತಿನಲ್ಲಿ ಕುಣಿದಾಡಿ ಮಣಿದಾಡುತ್ತಿದ್ದವು. ಬಾಯಿಂದ " ಝಿಂಗ ಝಿಂಗಾ ಝಿಂಗ ತಾತಾ ತಾತಾs " ಎಂಬ ಮಂತ್ರವು ಗೆಜ್ಜೆ ಸನಾದಿಗಳ ಕೆಲಸ ಮಾಡುತ್ತಿತ್ತು.

' ಹಾಗಾದರೆ ಹುಲಿಯುಗುರಿನ ಗಾಯಗಳೇನಿವು ? ' ಎಂದು ನಾನು ಅಸಿವಸಿಯಿಂದ ಕೇಳಿದೆ, ಯಾಕಂದರೆ ವರ್ಣನೆ ಚನ್ನಾಗಿ ಬೆಳೆಯುತ್ತಿತ್ತು. ನಾನು ಕೇಳಿದ ಪ್ರಶ್ನೆಗೆ ಉತ್ತರ ತೋರಲಿಲ್ಲ.

' ಹಾಂ, ಇನ್ನೂ ಮುಂದೆ ಮೋಜ ಅದ, ಸಣ್ಣ ಕಾಕಾಗ ಗೊತ್ತೇ ಇಲ್ಲ, ಅಲ್ಲೇನಪಾ ಅಪ್ಪಾ ? ' ಎಂದ ಹುಡುಗ. ತನಗೇ ಆದ ಸಂಗತಿಯನ್ನು ಕಥೆಯ ರೂಪದಲ್ಲಿ ಕೇಳುವ ಅವನ ತಾಳ್ಮೆ

ನೋಡಿ ನಾನೂ 'ಮುಂದೇನಾತು ?' ಎಂದೆ.

"ಆಯಿತು, ಅಂದು ಮನೆಯಲ್ಲೆಲ್ಲ ಹುಲಿಯ ಕುಣಿತವೇ ಕುಣಿತ. ಹಾಸಿಗೆ, ಮಣೆ, ಮಂಚ ಎಲ್ಲಿ ನೋಡಿದಲ್ಲಿ ಹುಲಿ ಕುಣಿತ. ಸ್ನಾನಾ, ಊಟಾ, ಮಂತ್ರಾ, ಸಿದ್ದನ ಬೆನ್ನು ಹತ್ತಿ ಪೂಜೆಯ ಆಚಾರ್ಯರ ಎದುರಿಗೆ ಹೋಗಿ, ಒಕ್ಕಲಿಗಿತ್ತಿ ಸೆರಗು ಎಳೆದು, ಹುಲೀ ಕುಣಿಯಲಿಕ್ಕೆ ಹತ್ತಿತು

'ಅವ್ವನ ತುರುಬು ಹಿಡಿದಿದ್ದೆ ಮರಿತಿದ್ದ್ಯಪ್ಪ, ಆಬ್ಬಾಕ ಹೇಳಲಿಲ್ಲಾ ?' ಹುಡುಗ ಕಥೆಗೆ ತಿದ್ದುಪಡಿ ಮಾಡಿದ

'ಹೌದು ಬಹಳ ಜಾಣನಾ ಮಾಡಿದೀ' ವೆಂಕಟರಾಯ ಮುಂದೆ ಕಥೆ ಬೆಳೆಸಿದ "ಅಂತೂ ಏನು ಮುಂದೆ ಒಂದು ತಿಂಗಳವರೆಗೆ ನಮ್ಮ ಮನೆಯಲ್ಲಿ ಹುಲಿಯ ಹಾವಳಿ ಬಹಳ ಇತ್ತು, ಅದೇ ಸುಮಾರಕ್ಕೆ ನಮ್ಮೂರಿಗೆ ಒಂದು ಸರ್ಕಸ್ ಬಂತು ಸರ್ಕಸ್ಸೇನು ಅಷ್ಟಕ್ಕಷ್ಟೇ ಇತ್ತು ಹಾಗೆ 'ಬರೇ ಸರ್ಕಸ್ ಎಂದಾದರೆ ಬೇಕು' ಅಂತ ಅನಿಸಿಕೊಳ್ಳುವ ಒಂದು ಕುಸಗ್ಯಾ, ನಾಯಿಯಾಕಾರದ ಒಂದು ಮೊಲ, ಕೆಲವು ಮಂಗ್ಯಾ, ನಾಯಿ ಬಟ್ಟಿನ, ತಪ್ಪು ಕೆಲವು ಇದ್ದವು. ಅವರಲ್ಲಿ ಬಹಳ ಸರ್ಗದಲ್ಲಿ ನಮ್ಮೂರಿಗೆ ಸರ್ಕಸ್ಸು ಬಂದಿರಲಿಲ್ಲ ನಾವೆಲ್ಲರೂ ಹಗಲು ಪ್ರಾಣಿಗಳನ್ನು ನೋಡಲು ಹೋದೆವು ಈ ರಾಯರೂ ಜೋಡಿಗೆ ಇದ್ದರು

ಹುಡುಗ ಮೂಗು ಉಬ್ಬಿಸಿ, ಮಂಡಿ ಬದಲಿಸಿ, ಬಂದೂಕ ಸಮ ಮಾಡಿಕೊಂಡು "ಮುಂದ ಹೇಳಪ್ಪ" ಎಂದ. ನನ್ನಷ್ಟೇ ಏಕೆ, ನನಗಿಂತ ಒಂದು ತೂಕ ಹೆಚ್ಚೇ ಉತ್ಸಾಹವು ತನ್ನ ಕಥೆ ಕೇಳುವದರಲ್ಲಿ ಅವನಿಗಿತ್ತು

"ನಾವು ಆನೆಯ ಆಟ, ಕುದುರೆಯ ಸಾಲು, ಮಂಗನ ಚೇಷ್ಟೆಗಳನ್ನು ನೋಡಿಕೊಂಡು ಹುಲಿ ಪಂಜರಗಳ ಕಡೆಗೆ ಹೊರಟೆವು 'ನಡೆಯಿರಿ ಇನ್ನು ಹುಲಿ ನೋಡೋಣ" ಎಂದು ಜೊತೆಯವರಿಗೆ ಅತ್ತ ಹೊರಳಿಸಿದೆ. ಕೆಲವರು ಇನ್ನೂ ಮಂಗನಾಟ ನೋಡುವದರಲ್ಲಿ ದಂಗಾಗಿದ್ದರು ನಮ್ಮ ರಾಯರು ಮಾವಿನ ಹಣ್ಣು ತಿನ್ನುತ್ತ "ಝಂಗ

ಝಿಂಗಾ" ನೃತ್ಯವನ್ನು ಪ್ರಾರಂಭಿಸಿದ್ದರು. ಹತ್ತಿರ ಪಂಜರದಲ್ಲಿ ಗಂಡು—ಹೆಣ್ಣು ಹೊಸಿಗಗಳೂ ಎರಡು ಮರಿಗಳೂ ಇದ್ದುವು ತಾಯಿ ಮರಿಗಳನ್ನು ಬಾಲದಿಂದಾಡಿಸುತ್ತ, ಕಾಲುಗಳಿಂದ ದೂಡುತ್ತ, ಹುಸಿ ಏಟು ಹೊಡೆಯುತ್ತ, ನಲಿಗಿತ್ತು. ಗಂಡು ಹೊಸಿಗ ಕಾವಲುಗಾರನ ಗಾಂಭೀರ್ಯದಿಂದ ಎಡೆಯಾಡುತ್ತಿತ್ತು ನಮ್ಮ ರಾಯರು ಇತ್ತ "ಅಪ್ಪಾ ಆ ಹುಲಿ ಪಂಜರದಾಗ್ಯಾಕ ಮಲಗ್ಯಾದ ? ಯಾವಂಗಾ ಹುಲಿ ? ನಮ್ಮೂರಿನಾಗ ನಪ್ಪಾ ಹುಲಿ ಅಂದಾ ? ಮಾಡದ್ಯಾ ಏನು ? ಅವನ ಬಾಲಾ ಯಾರೂ ಯಾಕ ಹಿಡಿದಿಲ್ಲಾ ? ನಾ ಹಿಡೀಲೇನಪ್ಪಾ ? ಅವಗ ಗೆಜ್ಜಿ ಯಾಕ ಇಲ್ಲಾ ?" ಎಂದು ಇಂಥ ಪ್ರಶ್ನೆಯ ಸುರಿಮಳೆ ನಡೆಸಿದ್ದ ನಾನು ಎಲ್ಲದಕ್ಕೂ ಹೂಂ ಹೂಂ ಎನ್ನುತ್ತ ಹೊಸಿಗನ ದರ್ಶನ ನೃತ್ಯ ನೋಡುವದರಲ್ಲಿ ಮೈಮರತಿದ್ದೆ. ನಮ್ಮ ಲಕ್ಷ್ಯವೇ ಅವನ ಕಡೆಗಿರಲಿಲ್ಲ

'ಹಾಗಾದರೆ ಹುಲಿಯ ಗುರುತೇನು ಗಲ್ಲದ ಮೇಲಿದ್ದುದು ?' ಎಂದು ನಾನು ಹುಡುಗನ ಗಲ್ಲದ ಮೇಲೆ ಮತ್ತೊಮ್ಮೆ ಕೈಯಾಡಿಸಿದೆ ಹುಡುಗ ತನ್ನ ಕೈ ಕಿತ್ತಿಕೊಳ್ಳುತ್ತ, ತೊಡೆ ಬಡಿದುಕೊಳ್ಳುತ್ತ 'ಅಲ್ಲಾ, ಅಲ್ಲಾ, ಕಡೀಕ ರಥೀ ಬಾಳ ಮೋಜ ಅದ' ಎಂದು ಕಣ್ಣು ಇಷ್ಟಗಲ ಮಾಡಿದ

"ಮುಂದೇನಾಯಿತೋ ನಮಗೆ ಗೊತ್ತೇ ಇಲ್ಲ. ನಮ್ಮದು ಬರೇ ತರ್ಕ. ಇವನು ಆ ಹುಲಿಯ ಕಡೆಗೆ ಹೋಗಿರಬೇಕು ಅಷ್ಟರಲ್ಲಿ ಒಂದು ಮಂಗ ಹೇಗೋ ಸರಪಳಿ ಬಿಚ್ಚಿಕೊಂಡು ಇವನ ಕೈಯೊಳಗಿನ ಮಾವಿನಹಣ್ಣಿನೊಡನೆಗ ಇವನ ಕೈ ಕೊಸರಿದೆ. ಇವನು ಬಿಟ್ಟಿಲ್ಲ ಅದು ಚಿವುಂಕೊಂಡಿದೆ. ಈ ಗೊಂದಲಕ್ಕೆ ಹುಲಿಯೆದ್ದು ಬಾಲ ಅಪ್ಪಳಿಸಿ ಪಂಜರದೊಳಗಿಂದ ತನ್ನ ಮುಂಗಾಲು ಚಾಚಿತ್ತು.

"ಯಾಕಪ್ಪಾ ನಾನು ಹುಲಿಯ ಬಾಲ ಜಗ್ಗಿದ್ದ ಬಿಟ್ಟೇಬಿಟ್ಟೆಯಲ್ಲ ?" ಎಂದು ತಪ್ಪು ತೋರಿಸಿಕೊಟ್ಟ ಹುಡುಗ

"ಅದೇನೋ ನಮಗೆ ಗೊತ್ತಿಲ್ಲ" ವೆಂಕಟರಾಯ ಎಂದ.

"ಅದ್ಯಾಕ, ಅಜ್ಜನ ಮುಂದ ನೊನ್ನೆ ಹೇಳಲಿಲ್ಲs ಇದನ್ನ

ಹೌದು, ನಾನು ಬಾಲಾ ಜಗ್ಗಿದ್ದೆ. ಝುಂಗ ಝುಂಗಾ ಅಂತ, ನನಗ ಗೊತ್ತದ" ಎಂದು ಹುಡುಗ ತನ್ನ ಪೌರುಷ ಹೇಳಿಕೊಂಡ.

ವೆಂಕಟರಾಯ "ಆ ಹುಲಿಯು ಕೈಯಲ್ಲಿ ಸಿಕ್ಕಿದ್ದರೆ ತಿಳಿಯು ತ್ತಿತ್ತು ಅಪ್ಪನ ಅವಸ್ಥೆ" ಎಂದು "ಇನ್ನೊಮ್ಮೆ ಹುಲಿಯ ಬಾಲಾ ಹಿಡಿಯುತ್ತಿಯೇನು ?" ಎಂದು ಬೆದರಿಸಿದ ?

"ಆದರ ಮೀಸೀ ಹಿಡಿದು ಎಳೀತೇನಿ. ಇನ್ನೊಮ್ಮೆ ಬರಲಿ ಗುಂಡು ಹಾಕತೇನಿ" ಎಂದು ಎದ್ದು ಬಂದೂಕು ಗುರಿ ಹಿಡಿದ ಶೂರ ಸರದಾರ !

ಕಥೆ ಚೆನ್ನಾಗಿತ್ತು; ಬಹಳ ಆವೃತ್ತಿಗಳಾಗಿರಬೇಕೆಂದೂ ತೋರಿತು. ನಾನು ಅಂದೇ ಸಂಜೆಗೆ ಅಲ್ಲಿಂದ ಹೊರಟು ನಮ್ಮೂರಿಗೆ ಬಂದು ಅಣ್ಣನಿಗೆ ಈ ಕಥೆ ಹೇಳಿದಾಗ ಅವನು ಮಲಗಿದವನು ಎದ್ದು ಕೂತು 'ಹಾಗಾದರೆ ಹುಲಿ ಹೊಡೆದಿತೆ ?' ಎಂದು ಗಾಬರಿಗೊಂಡು ಕೇಳಿದ. 'ಅಲ್ಲ ಮಂಗ' ಎಂದು ನಾನು ಹೇಳಿದಾಗ ಅವನು ಶಾಂತ ನಾಗಿ ಮತ್ತೆ ಹಾಸಿಗೆಯಲ್ಲಿ ಅಡ್ಡಾದನು. ನನ್ನ ಕಣ್ಣೆದಿರು ಆ ಸಣ್ಣ ತುಂಟನ ಮೂರ್ತಿ ಮಾತ್ರ ಕುಣಿಯುತ್ತಿತ್ತು. 'ಹುಲಿಯ ಮೀಸೆ ಹಿಡಿದೆಳೆಯುವ ಹುಡುಗ !' ಎಂದು ಕೊಂಡೆ. ಆ ಚಿವುರು ಗಾಯ ಹುಲಿಯದಿರಬೇಕೆಂದು ನಾನೇಕೋ ತಿಳಿದುಕೊಂಡೆ.



# ಫಾ ಲಾ ಫೂ !



೧

ಪ್ರಹ್ಲಾದನೆಂದರೆ ಪ್ರತ್ಯಕ್ಷ ಆಹ್ಲಾದ ಮೂರ್ತಿ. ಆ ಪ್ರಾಣಿಗೆ ಅತ್ತೇ ಗೊತ್ತಿದ್ದಿದ್ದಿಲ್ಲೆಂದರೂ ಸಾಗೀತು. ಆದರೆ ಜನರನ್ನು ನಗೆಗೀಡು ಮಾಡಲಿಕ್ಕೆ ಕೊಳಕು ನಗೆ ನಗುವದನ್ನು ಅವನರಿಯನು. ಹುಡುಗನು ಕರುಳುಳ್ಳವನು. ಒಂದಿಷ್ಟು ಮನಸಿಗೆ ಕೆಡಕೆನಿಸಿದ ಕೂಡಲೇ ಅದರ ಛಾಯೆಯು ಮೋರೆಯ ಮೇಲೆ ಬೀಳುತ್ತಿತ್ತು. ಮನಸು, ರಾಜಮನಸು ದೈವುಳ್ಳವರ ಮಗನೆಂಬ ಗರ್ವವಿದ್ದಿಲ್ಲ. ಎಲ್ಲರಿಗೂ ಬೇಕಾದವನು. ಉದಾರ, ಬುದ್ಧಿ ಚುರುಕು. ಆದರೂ ತಾನೇ ಜಾಣನೆಂಬ ಒಣಹೆಮ್ಮೆ ಅವನಿಗಿದ್ದಿಲ್ಲ. ಆದ್ದರಿಂದ ವರ್ಗದೊಳಗಿನ ಹಸಿ ದಡ್ಡರ ಕೂಡಲೂ ಓದುವನು, ಬರೆಯುವನು, ಆಡುವನು, ಮಾತಾಡುವನು. ಅಶಕ್ತನಲ್ಲದಿದ್ದರೂ ಮೈ ಬಡಕ. ಗೊಂದಲ ಗುದಮುರಿಗೆಗಳು ಅವನಿಗೆ ಹುಟ್ಟಾ ಸೇರವು. ಸಾಲೆಯಲ್ಲಿಯೂ ಓಣಿಯಲ್ಲಿಯೂ ಜಗಳಾಟ ಬೈದಾಟ ಹತ್ತಲು ವಿಶೇಷವಿಲ್ಲದಿದ್ದರೆ ಒತ್ತಟ್ಟಿಗೆ ಮುಗುಳುನಗೆ ನಗುತ್ತ ನಿಂತುಬಿಡುವನು. ವಿಕೋಪಕ್ಕೆ ಹೋಗುವ ಲಕ್ಷಣ ಕಂಡರೆ ಜಗಳ ಬಿಡಿಸಲು ಯತ್ನಿಸುವನು, ಕೈಮೀರಿದರೆ ಅಲ್ಲಿಂದ ಹೊರಟುಹೋಗುವನು. ಜಗಳಗಂಟರು ಅವನಿಗೆ ಪುಕ್ಕನೆನ್ನುತ್ತಿದ್ದರು! ಆದರೆ ರಾಮುನಿಗೆ ಮಾತ್ರ ಪ್ರಲ್ಹಾದನ ಅಳವು ಹತ್ತಿತ್ತು.

ರಾಮು! ಆಟ ನಡೆದಲ್ಲಿ ವಿರಾಮು, ನೋಟನಡೆದಲ್ಲಿ ಆರಾಮು ಎಂದು ಅವನ ಗುರುಗಳು ಅವನ ಚೇಷ್ಟೆ ಮಾಡುತ್ತಿದ್ದರು. ಅವನೂ

ನಗೆಗಾರನು ಗುರುಗಳ ಮಾತಿಗೆ ಮಾತು ಕೂಡಿಸಿ 'ಬೇಟವಿದ್ದಲ್ಲಿ ಅರ್ಧವಿರಾಮ. ಊಟವಿದ್ದಲ್ಲಿ ಪೂರ್ಣವಿರಾಮ' ಎಂದೆನ್ನುತ್ತಿದ್ದನು ಸ್ವಭಾವ ನಿಜ ಹಟ. ಹಿಂದೊಂದು ಮುಂದೊಂದಿಲ್ಲ. ಬೈದರೂ ಹಿಂದೆ ಬೈಯುತ್ತಿದ್ದಿಲ್ಲ ಸೊಕ್ಕಿನವನಲ್ಲಗಿದ್ದರೂ ತನ್ನ ದಿಮ್ಮಿನಲ್ಲಿರುವವನು ಒಂದಿಷ್ಟು ಸಿಟ್ಟಿನವನಾದರೂ ಸಮಂಜಸ ಮನಸಿನವನು, ಹಟದವನಲ್ಲ! ನಾಕಷ್ಟು ಜಾಣನಿದ್ದರೂ ಓದುವದು ಬೇಡ. ಹನ್ನೆರಡು ವರುಷದವನಾದರೂ ದನಗಾರ ಹುಡುಗರನ್ನೂ ಎತ್ತಿ ಒಗೆಯುತ್ತಿದ್ದನು, ಇಷ್ಟು ಶಕ್ತಿವು ಆಗೀಗ ಸ್ವಲ್ಪ ಜಗಳವೂ ಬೇಕು. ಆದರೂ ಅವನು ಪ್ರಲ್ಹಾದನ ಕೂಡ ಎಂದೂ ಜಗಳಾಡುತ್ತಿದ್ದಿಲ್ಲ. ಅವರಿಬ್ಬರ ಗೆಳತನವು ಏನೋ ಕೂಡಿಬಿಟ್ಟಿತ್ತು. ಅವರಿಬ್ಬರ ಮನೆತನದ ಋಣಾನುಬಂಧವು ಅವರ ಗೆಳತನಕ್ಕೆ ಪುಟಿಗೂಟ್ಟಿತ್ತೇ ಹೊರತು ಕಾರಣವಾಗಿದ್ದಿಲ್ಲ ರಾಮನ ಗುಣಪಕ್ಷಪಾತವೂ ಪ್ರಲ್ಹಾದನ ತಾಳ್ಮೆಯೂ ಆ ಗೆಳತನ ಬಾಳಲಿಕ್ಕೆ ಕಾರಣವಾಗಿದ್ದವು

ಇಬ್ಬರೂ ಎಂದೂ ಜಗಳಾಡುತ್ತಿದ್ದಿಲ್ಲವೆಂತಲ್ಲ ಚಿಕ್ಕಂದಿನಲ್ಲಿ ಇದು ಅಸಾಧ್ಯವೂ ಅಸ್ವಾಭಾವಿಕವೂ ಆಗಿರುವದು ಪ್ರೇಮಕ್ಕೆ ವಿರಹಾವಸ್ಥಾತೆ ಇರುವಂತೆ ಗೆಳೆತನಕ್ಕೆ ಜಗಳಾಟವಿರುವದು ಹಗೆತನದ ಹುರುಳಿಲ್ಲದ ಜಗಳಾಟಗಳು ಗೆಳೆತನದ ಗಿಡಕ್ಕೆ ಗೊಬ್ಬರದಂತಿರುವವು ಗೆಳೆತನದ ವಿಶ್ವಾಸದ ಕೂಡ ಇಂಥ ಜಗಳಾಟಗಳ ಬಾಳಿಕವೂ ಬಾಡಿಸಿಕೊಳ್ಳಲಿಕ್ಕ ಬೇಕು ಇಂಥ ಜಗಳಾಟಗಳು — ದ್ವೇಷದಿಂದಲ್ಲ - ಒಂದು ಬಗೆಯ ಸ್ನೇಹಪ್ರವೃತ್ತಿಯಿಂದಲೇ ಆಗುವವು. ಇಂಥವುಗಳಿಂದಲೇ ಗೆಳೆತನವು ದೃಢವಾಗುವದು. ಇದೊಂದು ಪರಮೇಶ್ವರೀ ಪ್ರೇಮದ ಲೀಲೆಯೇ! ಇದಿಲ್ಲದಿದ್ದರೆ ಸಂಸಾರವು ಉಪ್ಪಿಲ್ಲದ ಊಟವಾಗೀತು.

ಇದೂ ವರೆಗೆ ಪ್ರಲ್ಹಾದನೂ ರಾಮನೂ ನಾಲ್ಕೈದು ಬಾರಿ ಜಗಳಾಡಿದ್ದರು, ಅದು ಅವರ ಗೆಳೆತನವನ್ನು ವೃದ್ಧಿಗೊಳಿಸಿತ್ತು ಏನೋ ಬಾಲಲೀಲೆ! ಅಕಾರಣ ಕಾರಣದಿಂದಲೂ ಸಲ್ಪ ಕಾರಣದಿಂದಲೂ ರಾಮನು ಸಿಟ್ಟಿಗೇಳುವನು. ಇಬ್ಬರೂ ಒಂದೆರಡು ದಿನ

ಮನೆಯೊಳಗೆ ಬರುತ್ತಲೇ 'ಬಂದಿರಾ ಅಪ್ಪಾ! ಬರ್‍ರಿ. ಕೈಕಾಲು ತೊಳಕೊಳ್ಳಿರಿ ಕೋಟು ಟೊಪ್ಪಿಗೆ ತೆಗೆದಿಡಿರಿ, ಪೈರಣಾ ಇರಲಿ. ಈಗೇ ಏಕೆ ಬರಿಪ್ಪೈಯಿಂದ ಅಡ್ಡಾಡುತ್ತೀರಿ?' ಎಂದಳು. ಹುಡುಗರು ಕೋಟು ಟೊಪ್ಪಿಗೆ ತಗೆದಿಟ್ಟು ಕೈಕಾಲು ತೊಳೆದುಕೊಂಡು ಬಂದರು. ಹುಡುಗರ ಕೈಯಲ್ಲಿ ಕಮಲಾಬಾಯಿಯು ಒಂದೊಂದು ಉಂಡಿಯನ್ನು ಕೊಟ್ಟಳು. ಹುಡುಗರು ಉಂಡಿಯನ್ನು ತಿನ್ನುತ್ತ, ಆನಂದದಿಂದ ನಗುತ್ತ, ಹಾರಾಡುತ್ತ, ಹೊರಗೆ ಪಡಸಾಲೆಯಲ್ಲಿ ಬಂದರು. ಪ್ರಲ್ಹಾದನ ತಂದೆಯವರೂ ಊರಲ್ಲಿರಲಿಲ್ಲ. ಅವರಾಟವನ್ನು ತಡೆಯುವರಾರು ?

" ರಾಮೂ ! ಉಂಡಿ ತೀರುತ್ತಲೇ ಲೆಕ್ಕಗಳನ್ನಷ್ಟು ಮಾಡಿಬಿಡೋಣ " ಎಂದು ಪ್ರಲ್ಹಾದ ರಾಮೂನಿಗೆ ಹೇಳಿದ.

' ಇರಲಿ ಬಿಡೋ, ಈ ಹೊತ್ತು ಮಧ್ಯಾನ್ಹದ ಕಡೆಗೆ ಸಾಲೆಗೂ ಹೋಗೋಣಬೇಡ. ನಾಳೆ ಕೇಳಿದರೆ ನಿನ್ನೆ ನಿನ್ನ ಹುಟ್ಟಿದ ದಿವಸವಿತ್ತೆಂದು ಹೇಳಿದರಾಯಿತು.'

'ಮಧ್ಯಾನ್ಹದಲ್ಲಿ ಮನೆಯಲ್ಲಿದ್ದಾದರೂ ಏನು ಮಾಡುವದು? '

' ಆಡೋಣ. '

' ಎಲ್ಲ ಹುಡುಗರು ಸಾಲೆಗೆ ಹೋಗಿರುತ್ತಾರಲ್ಲ? '

' ನಾವಿಬ್ಬರೇ ಆಡೋಣ. '

' ಏನು? '

' ಏನಾದರೂ. '

ಪ್ರಲ್ಹಾದನು ಸುಮ್ಮನಾದನು. ಅವನಿಗೆ ಆಟನೋಟಗಳು ಸೇರುತ್ತಿದ್ದರೂ ದಿನದ ಕೆಲಸ ಬಿಟ್ಟು ಆಡುವದೆಂದರೆ ಅವನ ಜೀವದ ಸುತ್ತು ಬರುತ್ತಿತ್ತು.

' ನಿಮ್ಮ ಮನೆಯವರು ಬೈಯಲಿಕ್ಕಿಲ್ಲವೆ? '

' ನಾನು ನಿನ್ನೇ ಹೇಳಿರುವೆನು. '

' ನಮ್ಮಪ್ಪನು ಬೈದಾಳು! '

' ನಾನು ಹೇಳುತ್ತೇನೆ. '

ಹೀಗೆಂದವನೇ ರಾಮನು ಒಳಗೆ ಹೋದನು. ಪ್ರಲ್ಹಾದನೂ ಕೈಯಲ್ಲಿ ಪಾಟಿಯನ್ನು ತಕ್ಕೊಂಡು ಅವನ ಬೆನ್ನು ಹತ್ತಿ ಒಳಗೆ ಹೋದನು.

‘ ಕಮಲಾಬಾಯರೆ ! ನಾವು ಮಧ್ಯಾನ್ಹದ ಕಡೆಗೆ ಶಾಲೆಗೆ ಹೋಗುವದಿಲ್ಲ. ’ ಎಂದು ರಾಮನು ಹೇಳಿದನು.

‘ ಅದ್ಯಾಕೆ ’ ಎಂದು ಕುತುಹಲದಿಂದ ಕಮಲಾಬಾಯಿ ತಿರುಗಿ ಕೇಳಿದಳು.

‘ ಸುಮ್ಮನೆ ’

‘ ಸುಮ್ಮನೆ, ಎಂಬ ಉತ್ತರಕ್ಕೆ ಪ್ರಶ್ನೆಯೇ ಇಲ್ಲ! ‘ ಹುಡುಗರ ಜಾತಿ ಆಟಕ್ಕ ಪ್ರೀತಿ ’ ಎಂದು ಮನದಲ್ಲಂದುಕೊಂಡು ಕಮಲಾಬಾಯಿ ‘ ಮನಿಯಲ್ಲಿದ್ದು ಏನು ಮಾಡುತ್ತೀರಿ ’ ಎಂದು ಕೇಳಿದರು.

“ ಏನಾದರೂ ಆಡುತ್ತೇವೆ ”

‘ ಏನಾದರೂ ಅಂದರೆ ? ’

“ ಏನಾದರೂ “

“ ಏನಾದರೂ ” ಎಂಬ ಉತ್ತರದ ಮೇಲೆ ಅವರ್ತಚಿನ್ಹ ಹಾಕಿದ ಮೇಲೆ ಕೇಳುವದಾದರೂ ಏನು ಕೇಳಬೇಕು ? ‘ ಇರಲಿ ಹುಡುಗರೇನೋ ಪ್ರೀತಿಯಿಂದ ಕೇಳುತ್ತಾರೆ ’ ಎಂದಂದುಕೊಂಡು ಪ್ರಲ್ಹಾದನ ಮೋರೆಯ ಕಡೆಗೆ ನೋಡುತ್ತ ಕಮಲಾಬಾಯಿ “ ಹಾಗೇ ಆಗಲಿ ” ಎಂದಳು.

“ ಈಗಾದರೂ ಆಯಿತೋ ಇಲ್ಲೋ ? ಬಿಡು ನಿನ್ನ ಪಾಟೀ ” ಎಂದು ರಾಮು ಪ್ರಲ್ಹಾದನ ಕೈಯೊಳಗಿನ ಪಾಟಿಯನ್ನು ಕಸಿದು ಕೊಳ್ಳಲಿಕ್ಕೆ ಹೋದನು. ವ್ರತಸ್ಥನಾದ ಸಂಯಮಿಯಂತೆ ಅವನು ಕೈಯೊಳಗಿನ ಪಾಟಿಯನ್ನು ಬಿಡಲಿಲ್ಲ ಮನಸಿನೊಳಗಿನ ನಿಶ್ಚಯವನ್ನೂ ಬಿಡಲಿಲ್ಲ. ಅಲ್ಲಿಂದ ಇಬ್ಬರೂ ಹೊರಗೆ ಬಂದರು. ರಾಮನು ಹೊರಗೆ ಅಂಗಳದಲ್ಲಿ ಮೂಲೆಯಲ್ಲಿ ಮಲಗಿಕೊಂಡಿದ್ದ ನಾಯಿಯ ಸರಪಳಿಯನ್ನು ಬಿಚ್ಚಿ ‘ ಪಲ್ಯಾ ! ಇದೇ ಈಗ ಶೀನೂನ

ಮನೆತನಕ ನಾಯಿಯನ್ನು ಓಡಿಸಿಕೊಂಡು ಹೋಗಿಬರುತ್ತೇನೆ' ಎಂದವನೇ 'ಛೂ ಹೆಹಹಾ' ಎನ್ನುತ್ತ ನಾಯಿಯೊಡನೆ ಹೊರಗೆ ಓಡಿದನು.

ಪ್ರಲ್ಹಾದನು 'ರಾಮೂ! ಅಡಿಗೆಯಾಗಿದೆ, ಹೊತ್ತು ಮಾಡ ಬೇಡ' ಎಂದೆನ್ನುವಷ್ಟರಲ್ಲಿ ಅವನು ಓಣೀ ದಾಟ ಹೋಗಿದ್ದನು.

೩

ಇತ್ತ ಪ್ರಲ್ಹಾದನು ಲೆಕ್ಕಗಳನ್ನೆಲ್ಲ ಬಿಡಿಸಿದನು ಇತಿಹಾಸ ವನ್ನು ಓದಿಕೊಂಡು ಪಾರಮಾಡಿದನು ಮುಂಜಾವಿನ ವಾಚನ ಪಾಠವನ್ನು ಮತ್ತೆ ಓದಿಕೊಂಡನು. ಇಷ್ಟಾದಮೇಲೆ ಬಾಯಿಗೆ ಬಂದ ಕವಿತೆಗಳನ್ನನ್ನುತ್ತಾ ಅವನ ಚಿಕ್ಕ ತಂಗಿಯಾದ ಚಂಪಿಯ ಕೂಡ ಆಡುತ್ತಾ ಕೂತುಕೊಂಡನು

ಕಮಲಾಬಾಯಿ ಒಳಗಿಂದ, ಪ್ರಲ್ಹಾದನಿಗೆ "ಅಣ್ಣಯ್ಯಾ ಬಾರಪ್ಪಾ, ಮಣೆ ಹಾಕಿಕೋ, ನಿನ್ನ ರಾಮಣ್ಣನನ್ನು ಕರಿ" ಎಂದಂದಳು. ಇಷ್ಟರಲ್ಲಿ ರಾಮುನ ಧನಿಯೂ ಓಣಿಯಲ್ಲಿ ಮತ್ತೆ ಕೇಳಬರಹತ್ತಿತು ಪ್ರಲ್ಹಾದನು ಅಂಗಳದಲ್ಲಿ ಬರುವದರೊಳಗೆ ರಾಮುನು ನಾಯಿಯ ಕೂಡ ಓಡುತ್ತಾ ಬಂದನು. ನಾಯಿಯು ತೇಕುತ್ತಿತ್ತು ರಾಮುನೂ ಬೆವೆತಿದ್ದನು

"ರಾಮೂ, ನೀನೆಷ್ಟು ದಣಿದಿ! ನಾಯಿಯನ್ನೆಷ್ಟು ದಣಿಸಿದಿ" ಎಂದು ಪ್ರಲ್ಹಾದನೆಂದನು

'ಇರಲಿ ಬಿಡು, ಇಂದು ಖಂಡ್ಯಾನಿಗೆ ಉಂಡಿ ಹಾಕೋಣಂತೆ' ಹೀಗೆಂದು ಅದನ್ನು ಛಪ್ಪರಿಸಿ ಮೂಲೆಯಲ್ಲಿ ಕಟ್ಟಿಬಿಟ್ಟನು. ಮತ್ತೆ ರಾಮುನು ಒಳಗೆ ಬಂದು, ಕೈಕಾಲು ಮುಖ ತೊಳಕೊಂಡು ಮಡಿಯ ಲಂಗೋಟಿಯನ್ನು ಹಾಕಿಕೊಂಡನು. ಪ್ರಲ್ಹಾದನೂ ಮಡಿಯ ಲಂಗೋ ಟಿಯನ್ನು ಹಾಕಿಕೊಂಡನು. ಇಬ್ಬರೂ ಮಣೆಯ ಮೇಲೆ ಕುಳಿತು ಕೊಂಡರು. ಕಮಲಾಬಾಯಿಯು ಇಬ್ಬರಿಗೂ ಆಗ್ರಹಮಾಡಿ ಉಣ

ಹಾಕಿದಳು. ಊಟ ತೀರಿತು, ಇಬ್ಬರೂ ಕೈಬಾಯಿ ತೊಳಕೊಂಡು ಮಡಿ ಲಂಗೋಟಿ ಬಿಟ್ಟು ಧೋತರ ಉಟ್ಟು ಪೈರಣು ತೊಟ್ಟು ಕೊಂಡರು.

" ಪಲ್ಲಾ ! ನನ್ನ ಮನಸಿನಲ್ಲೊಂದು ಮಾತು ಬಂದಿರುವದು. ಬಿಚ್ಚಿಟ್ಟು ಇಂದು ಹಾಗೆ ಮಾಡೋಣವೇ ? " ರಾಮು ಕೇಳಿದ.

" ಏನದು ? "

' ಹೂಂ ಅನ್ನು ಅಂದರೆ ಹೇಳುತ್ತೇನೆ '

" ಹಾಗಾದರೆ ನಾನೊಂದು ಮಾತು ಹೇಳುತ್ತೇನೆ, ಹೂಂ ಅನ್ನು'

"ಹೂಂ ಏನು ಹೇಳು ? " ನಗುತ್ತ ಒಪ್ಪಿದನು.

' ನಿಮ್ಮ ಮನೆಗೆ ಹೋಗಿ ಪಾಟಿ ತಕ್ಕೊಂಡು ಬಾ. ಈ ಲೆಖ್ಖಗಳನ್ನಷ್ಟು ಮಾಡಿಬಿಡು."

" ಸಾಲೆಗೇ ಹೋಗುವದಿಲ್ಲವೆಂದ ಮೇಲೆ ಲೆಖ್ಖದ ಗೊಡುವೆ ಯಾತಕ್ಕೆ ? "

" ಅದೇನು ಇಲ್ಲ. ಈಹೊತ್ತು ನಾಲೆಗೆ ಹೋಗಲಿಕ್ಕೆ ಬೇಕು. ಮನಿಯೊಳಗೆ ನನಗೆ ಹೊತ್ತು ಹೋಗಲಾರದು. "

" ಅದರ ಹಂಚಿಕೆಯನ್ನು ನಾನು ಆಗಳೇ ಮಾಡಿಕೊಂಡು ಬಂದೆನು. "

" ಅದೇನು ? "

" ಇಂದು ತೋಟಕ್ಕೆ ಹೊಗೋಣ "

" ಮುಂದೆ ? "

' ಮುಂದೇನು ? ಬೆಲ್ಲದ ಹೋಳಿಗೆಯಂತೂ ಇದ್ದೇ ಇರುವವು. ಒಗ್ಗರಣೀ ಅವಲಕ್ಕೀ ಮಾಡಿಸೋಣ. ಉಳ್ಳಾಗಡ್ಡಿ ಬುರುಬುರಿ. ನಿಮ್ಮಲ್ಲಿ ಉಳ್ಳಾಗಡ್ಡಿ ಇರಲಿಕ್ಕಿಲ್ಲ. ಅವಲಕ್ಕೀ ತರಬೇಕಾದಾವು. ಎಲ್ಲ ತಂದು ತಯಾರಿಸಿಗೊಳ್ಳಲಿಕ್ಕೆ ಎರಡು ಮೂರು ತಾಸುಗಳು ಬೇಕೇಬೇಕು. ಶೀನನೂ ಬರುವನಂತೆ ! "

" ಬಲು ಸವಿಗಾರ ! ಇರಲಿ, ಅವ್ವನಿಗೆ ಹೇಳಿದರೆ ಆಕೆ ಎಲ್ಲಾ ಮಾಡುವಳು, ಸಾಲಿ ಬಿಟ್ಟಮೇಲೆ ಹೋಗೋಣ. ಇಳಿಹೊತ್ತು

ಆಗುವದು. ”

“ ಅದೇನೂ ಇಲ್ಲ ನಾವು ಇಲ್ಲಿಂದ ಮೂರಕ್ಕೆ ಹೊರಡಲಿಕ್ಕೆ ಬೇಕು. ಆಡುತ್ತಾ ಹೋದರೆ, ಅಲ್ಲಿಗೆ ಹೋಗಲಿಕ್ಕೇ ಎರಡು ತಾಸು ಬೇಕು ಅಲ್ಲಿ ಒಂದೆರಡು ತಾಸು, ಇಲ್ಲಿ ಬರಲಿಕ್ಕೆ ಒಂದೆರಡು ತಾಸು; ತಿರುಗಿ ಬರಲಿಕ್ಕೆ ಎಂಟು ಒಂಬತ್ತು ಹೊಡೆಯುವದು. ”

“ ನಿನ್ನಂತೆ ಆಗಲಿ, ಆದರೂ ನಾವು ೪ ಘಂಟೆಗೆ ಮನೆಗೆ ಬಂದರೆ ನಡೆದೀತು. ”

ರಾಮನೂ ಹೂಂ ಊಂ ಹೂಂ ಅನ್ನುತ್ತ ಅದಕ್ಕೆ ಒಪ್ಪಿಕೊಂಡನು ಮಧ್ಯಾಹ್ನದ ಅಭ್ಯಾಸ ಮಾಡಿದ್ದಿಲ್ಲ ಅದೊಂದು ಚಿಂತೆ ಅವನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಒಳಗೇ ಪ್ರಲ್ಹಾದನ ತಾಯಿಗೆ ತಾವು ತೋಟಕ್ಕೆ ಹೋಗುವವರಿರುವೆವೆಂಬೂ ಮಧ್ಯಾಹ್ನ ಸಾಲೆಗೆ ಹೋಗುವೆವೆಂದು ತಿಳಿಸಿದರು ಕಮಲಾಬಾಯಿಯು ಆನಂದದಿಂದ —‘ ನನ್ನಪ್ಪಗಳಿರಾ, ಹೀಗೆ ಸಾಲಿಗೆ ಹೋಗಿರಪ್ಪಾ ! ನಾಲಿ ತಪ್ಪಿಸಬಾರದು ನೀವು ಹೇಳಿದ್ದನ್ನೆಲ್ಲಾ ಮಾಡಿಸಿಡುತ್ತೇನೆ. ಎಷ್ಟು ಮಂದಿ ನೀವು ಹೋಗುವವರು ಮೂರು ಮಂದಿ ಏನು ?

“ ಇಲ್ಲ ! ನಾಲ್ಕು ಬಂಡ್ಯಾನು ಬರುವನು. ”

‘ ಹಾಗೇ ಆಗಲಿ. ’

೪

ಮಧ್ಯಾಹ್ನ ಶಾಲೆ ಮಾಸ್ತರರು ಅದೇ ನಿದ್ದೆಯೊಳಗಿಂದೆಚ್ಚತ್ತಿದ್ದರು ಕಣ್ಣು ಕೆಂಪಗಾಗಿದ್ದವು ಕೆಲವು ಹುಡುಗರು ಲೆಕ್ಕಗಳನ್ನು ಮಾಡುತ್ತಿದ್ದರು; ಕೆಲವರು ನೋಡುತ್ತಿದ್ದರು. ಅಂತೂ ಕೆಲಸ ನಡೆದಿತ್ತು. ಇಷ್ಟರಲ್ಲಿ ರಾಮನೂ ಪ್ರಲ್ಹಾದನೂ ಸಾಲೆಗೆ ಬಂದರು. ರಾಮನು ಮನೆಗೆ ಹೋಗಿ ಪಾಟಿ-ಪುಸ್ತಕಗಳನ್ನು ತಕ್ಕೊಂಡು. ಆಡುತ್ತ ನೋಡುತ್ತ ಬರಬೇಕಾದರೆ ಹೊತ್ತೇ ಆಯಿತು. ಅಯ್ಯನವರ ಕೆಂಪು ಕಂಣುಗಳು ದಿನದವೇ ಇದ್ದರೂ, ಅಭ್ಯಾಸ

ವನ್ನು ಮಾಡಿಕೊಂಡು ಬಂದಿದ್ದರೂ, ಪ್ರಲ್ಹಾದನ ಮೇಲೆ ಅವರ ಪ್ರೀತಿ ಇದ್ದರೂ, ಪ್ರಲ್ಹಾದನೇನೋ ಸ್ವಲ್ಪ ಇಳಿಮೋರೆ ಹಾಕಿ ರಾಮನ ಹಿಂದಿನಿಂದ ಬರುತ್ತಿದ್ದನು ರಾಮನಿಗೆ ಮೊದಲೇ ಸಾಲೆಗೆ ಬರುವದು ಬೇಕಾಗಿದ್ದಿಲ್ಲ, ಅದರಲ್ಲಿ ಅಭ್ಯಾಸವೂ ಆಗಿದ್ದಿಲ್ಲ, ಅಂದ ಮೇಲೆ ಅವನಿಗೆ ತಡಮಾಡಿ ಸಾಲೆಗೆ ಬಂದದ್ದು ಒಂದಿಷ್ಟು ಅಸಹ್ಯವೇ ಅನಿಸಿತ್ತು.

ಅಷ್ಟರಲ್ಲಿ ಮಾಸ್ತರರು ಪ್ರಲ್ಹಾದನನ್ನು ಕುರಿತು "ಓಹೋ! ರಾಯರು ಯಾಕೆ ತೂಕಡಿಸುತ್ತ ಬರುತ್ತೀರಿ?" ಎಂದರು ಪ್ರಲ್ಹಾದನೇನೂ ಮಾತನಾಡದೆ ಮುಗುಳುನಗೆ ನಗುತ್ತ ತನ್ನ ಸ್ಥಳದ ಕಡೆಗೆ ಹೊರಟನು. ರಾಮನನ್ನು ಕುರಿತು "ಇಂದೇಕೆ ಗೌಡರ ಝೂಝಾ ಸಿಂಗಾರಾಗಿ ಬಂದಿರುವದು" ಹೀಗೆಂದು ಎದ್ದು ಅವನ ಬೆನ್ನು ಥಪ್ಪರಿಸಲಿಕ್ಕೆಂದು ಅತ್ತ ಬಂದರು ರಾಮನು ಅವರ ಕೈ ತಪ್ಪಿಸಿಕೊಂಡು "ನಮ್ಮ ಅಂಗಿಯ ಮೇಲೇಕೆ ಕಣ್ಣು!" ಎಂದು ಮೆಲ್ಲಗಂದನು. ಅನೆಚ್ಚರದಲ್ಲಿದ್ದ ಮಾಸ್ತರರಿಗೆ ಅದು ಸಂಪೂರ್ಣ ಕೇಳಿಸದಿದ್ದರೂ ಹುಡುಗರಿಗೆ ಮಾತ್ರ ರಾಮನಾಡಿದ್ದು ಕೇಳಿಸಿತು. ಎಲ್ಲರೂ ಖೊಳ್ಳನೆ ನಕ್ಕರು. ಮಾಸ್ತರರು ಮತ್ತೆ ತಮ್ಮ ಖುರ್ಚಿಯ ಮೇಲೆ ಯಥಾಪೂರ್ವ ಕೆಲಸ ನಡೆಸುವ ಸಂಕಲ್ಪದಿಂದ ಕುಳಿತರು. "ಎಲಾ ಶೀನಾ! ಪ್ರಲ್ಹಾದನ ಮತ್ತೂ ರಾಮನ ಪಾಟೀ ನೋಡು ಮತ್ತು ಮುಂದಿನ ಲೆಖ್ಖಾ ಮಾಡಲಿಕ್ಕೆ ಹೇಳು" ಹೀಗೆಂದು ಕಣ್ಣು ಮುಚ್ಚಿಕೊಂಡರು.

ಶೀನನು ಪ್ರಲ್ಹಾದ–ರಾಮರ ಕಡೆಗೆ ಅಧಿಕಾರದ ನಡಿಗೆಯಿಂದ ಹೋದನು. ರಾಮನು ಲೆಖ್ಖಗಳನ್ನೆ ಮಾಡಿದ್ದಿಲ್ಲ, ಪ್ರಲ್ಹಾದನು ಮಾಡಿದ್ದನು.

'ಶೀನ್ಯಾ! ಬೆರ್ಕಿ! ನಮ್ಮನ್ನು ಕರೆಯದೇ ಸಾಲೆಗೆ ಬಂದೆಯಾ? ಇರಲಿ' ರಾಮನು ಶೀನನಿಗೆ ಅಂದನು.

'ಅದಿರಲಿ ಎಲ್ಲಿವೆ ಲೆಖ್ಖ?' ಎಂದು ದ ರ್ಪ ದಿಂ ದ

ಶೀನನಂದನು.

‘ ಸಂಜೆಯು ಫರಾಳ ಮಾಡಿಸಿದೆನು. ’

‘ ಅಂದರೇನು ? ’

‘ ಮಾಸ್ತರರಿಗೆ ಹೇಳಿಕೋ ! ಪಾಟಿ ತೋರಿಸುತ್ತೀ ಏನು?

“ ಗೆಳೆಯಾ ! ನಾನು ಹೇಳೇನೇ ? ಹೋಗಲಿ ಬಿಡು ಈ ಲೆಖ್ಖ ಬರೆದುಕೋ, ಬಿಡಿಸು ” ಎಂದು ಶೀನನು ಪ್ರಲ್ಹಾದನ ಪಾಟಿಯನ್ನು ನೋಡಿ “ ಎರಡೂ ಲೆಖ್ಖಗಳನ್ನು ತಪ್ಪಿರುವಿಯಲ್ಲ ? ” ಎಂದನು.

“ ನಾನು ಒಂದೂ ತಪ್ಪಿಲ್ಲ ”

“ ಉತ್ತರ ನೂರು ಬರಬೇಕು. ಹತ್ತು ಬರೆದಿರುವಿ. ”

“ ಮುಂದಿನ ಪೂಜಿ ಸ್ವಲ್ಪ ಅಳಿಸಿದ್ದೀತು ! ”

“ ನಮಗೇನು ಹೇಳುತ್ತೀ ನಾವು ಅರ್ಧಾ ರಾಯಿಟ್ ಕೊಡುವವರು. ”

“ ಮಾಸ್ತರಿಗೇ ತೋರಿಸುತ್ತೇನೆ — ಮಾಸ್ತರ್ ! ”

ಮಾಸ್ತರರು ಎಚ್ಚತ್ತು, ‘ ಏನದು ? ’ ಎಂದು ಗದ್ದರಿಸಿದರು.

“ ಇದು ನೂರಲ್ಲೇನರೀ ? ”

“ ಇದು ಹತ್ತಲ್ಲೇನರೀ ? ”

“ ಕುರುಡಾ ! ಇದು ನೂರು. ಕಾಗಿ ಕೈಯೊಳಗೆ ಕಾರಬಾರ ! ಶಿನ್ಯಾ ನಿನ್ನ ಜಾಗಾಕ್ಕೆ ಹೋಗಿ ಕೂಡು. ಪ್ರಲ್ಹಾದಾ ನೀನೆ ಲೆಖ್ಖಾ ನೋಡು. ”

‘ ಪ್ರಲ್ಹಾದ ಬ್ಯಾಡಿರಿ. ನೀವೇ ನೋಡಿರಿ ’ ಶೀನನೆಂದನು.

‘ ಹೌದರಿ, ನೀವೇ ನೋಡಿರಿ ’ ಎಂದು ಪ್ರಲ್ಹಾದನೂ ಅಂದನು.

‘ ಹಾಗೆ ಆಗಲಿ, ಲೆಖ್ಖಾ ಮಾಡಿರಿ. ’

ಲೆಖ್ಖಗಳನ್ನು ಹುಡುಗರು ಮಾಡಹತ್ತಿದರು. ರಾಮನು ನಡು ನಡುವೆ ಪ್ರಲ್ಹಾದನ ಪಾಟಿಯನ್ನು ಹಣಿಕಿ ಹಣಿಕಿ ನೋಡುತ್ತಿದ್ದನು. ಪ್ರಲ್ಹಾದನು ಕಣ್ಣಿವಟ ನೋಡಬೇಡೆಂದು ಹೇಳಿದರೂ ಅವನೇನು ನೋಡುವದನ್ನು ಬಿಡಲಿಲ್ಲ. ಲೆಖ್ಖ ಮಾಡುವದಾಯಿತು. ಮಾಸ್ತರರು ಇನ್ನು ನಿದ್ದೆ ತರವೆಲ್ಲವೆಂದು ‘ ಏ ! ಕತ್ತೇ ! ಅತ್ತೀಕೆ

ನೋಡುತ್ತೀ ? ” ಎಂದು ಗದ್ದರಿಸುತ್ತ ಎದ್ದರು ಒಂದೊಂದು ಪಾಟಿಯನ್ನು ನೋಡಹತ್ತಿದ್ದರು. ಪ್ರಲ್ಹಾದನ ಲೆಖ್ಖ ಸರಿಯಾಗಿತ್ತು, ಮಾಸ್ತರರು ರಾಮನ ಪಾಟಿಯನ್ನು ನೋಡಿದವರೇ ಕಣ್ಣೆಸಿದು ಅವನನ್ನು ನೋಡಿದರು. ಅವನು ಏನೂ ಗೊತ್ತಿಲ್ಲದವನಂತೆ ನಿಂತು ಕೊಂಡಿದ್ದನು.

“ ಖರೇ ಹೇಳು “ ಎಂದು ಮಾಸ್ತರರು ಗರ್ಜಿಸಿದರು

“ ಏನರೀ ? ” ರಾಮನು ನಕ್ಕು ಕೇಳಿದನು.

ಮಾಸ್ತರರು “ ಮಳ್ಯಾ ! ಖರೇ ಹೇಳು ” ಎಂದವರೇ ಒಂದು ಗುದ್ದಿದರು

“ ಸುಮ್ಮನೆ ಯಾಕೆ ಹೊಡೆಯುತ್ತೀರಿ ? ” ಎಂದು ಗದ್ದಿಕೆಯನ್ನು ಸಹಿಸಿ ಸಿಟ್ಟಿನಿಂದ ನೋಡುತ್ತ ಪ್ರಶ್ನಿಸಿದನು

‘ ಸುಮ್ಮನೇನೇ ಯಾರ ಲೆಖ್ಖಾ ನೋಡಿ ಮಾಡಿದಿ ? ’ ಎಂದು ಕಿವಿ ಹಿಂಡಿದರು.

‘ ನನಗೇನು ಬರುವದಿಲ್ಲನೇನು ? ’

“ ಹೌದು ಹೌದು, ತಡೀರಿ ಗೌಡರ ! ಇದೇ ಈಗ ಬರತಾವ ” ಎಂದು ಕಿವಿ ಹಿಂಡುತ್ತ ‘ ಶಿನ್ಯಾ ! ನಿನ್ನದು ನೋಡಿಕೊಂಡನೋ ಇಲ್ಲೋ ಖರೆ ಹೇಳು ’ ಎಂದು ಗದ್ದರಿಸಿದರು.

‘ ನಾನು ಅತ್ತಲಾಗೆ ಮೋರಿಮಾಡಿ ಕುಳಿತಿದ್ದೆ. ನಾನು ಪಾಟಿಯನ್ನು ಮುಚ್ಚಿಕೊಂಡಿದ್ದೆ. ನಾನು ಅವನನ್ನು ನೋಡಲೇ ಇಲ್ಲ ’

‘ಸುಮ್ಮನೆ ಬಡಬಡಿಸಬೇಡ, ಪಲ್ಯಾ, ನೀನು ಲೆಖ್ಖಾ ತೋರಿಸಿದೆಯೋ ಇಲ್ಲ ? ’

‘ ನಾನು ತೋರಿಸಲಿಲ್ಲರೀ ! ’ ಎಂದು ಪ್ರಲ್ಹಾದನು ‘ ತೋರಿಸಲಿಲ್ಲ ’ ಎಂಬ ಶಬ್ದಗಳನ್ನು ಒಂದಿಷ್ಟು ಒತ್ತಿ ನುಡಿದನು.

ಅದು ಸ್ವಸಂರಕ್ಷಣಕ್ಕಾಗಿಯೋ ಮಾತು ಹಾರಿಸಿಕೊಳ್ಳಲಿಕ್ಕೋ ತಿಳಿಯದು ಮಾಸ್ತರರು ಮಾತ್ರ ‘ ನೀನು ತೋರಿಸಿರಲಿಕ್ಕಿಲ್ಲ ಅವನು ನೋಡಿಕೊಂಡನೋ ಇಲ್ಲೊ ? ನಿನ್ನ ಜಾಣತನ ತೋರಿಸಬೇಡ ’ ಎಂದು ಸಿಟ್ಟಿಗೆದ್ದು ಕೇಳಿದರು ಪ್ರಲ್ಹಾದನು ಸುಮ್ಮನಾದನು

ರಾಮನ ಮೋರೆ, ಕಿವಿ, ಕಣ್ಣುಗಳು ಕೆಂಪಾಗಿದ್ದವು. ಅವನು ಪ್ರಲ್ಹಾದನ ಕಡೆಗೆ ನೋಡುತ್ತಿದ್ದನು. ಶೀನನು ಒಳಗಿಂದೊಳಗೆ ನಗುತ್ತಿದ್ದನು. ಎಲ್ಲ ಹುಡುಗರು ಹೆದರಿ ತಣ್ಣಗೆ ಕೂತಿದ್ದರು.

'ಪಲ್ಲಾ! ಹೇಳುತ್ತಿಯೋ ಗುದ್ದಲೋ? ' ಎಂದೊಡನೆ ಪ್ರಲ್ಹಾದನು ಏನೋ ತುಟಿಯೊಳಗೇ ಒಟಗುಟ್ಟಿದನು. 'ಹೌದು ಹೇಳು'

' ಸ್ವಲ್ಪ ನೋ .." ಪ್ರಲ್ಹಾದನು ಏನೋ ಜಿನುಗಿದನು

" ಗೌಡರ ! ಸುಳ್ಳಾಡಲಿಕ್ಕೆ ಬೇಕೇನು ? " ಎಂದು ಹಿಂದಿನ ಸೇಡು ತಕ್ಕೊಳ್ಳುವವರಂತೆ ಒಂದು ಜೋರಿನ ಏಟು ಕೊಟ್ಟರು. ಕುಂಯಿ ಅಂದರೂ ರಾಮನೆಂದೇ ಆ ಪೆಟ್ಟನ್ನು ತಡೆದುಕೊಂಡನು. ಇನ್ನೊಬ್ಬರಾಗಿದ್ದರೆ ನಲವನ್ನೇ ಹಿಡಿಯುತ್ತಿದ್ದರು

" ಸುಳ್ಳು— "

" ಹಾಗಾದರೆ ಉತ್ತರ ಹೇಗೆ ಬರೋಬರಿ ಬಂತು ? "

" ನಾನs ಮಾಡೇನಿ. "

" ನಡುವೆ ತಪ್ಪಿ ಉತ್ತರ ಅಷ್ಟೇ ಹೇಗೆ ಬರೋಬರಿ ಬರುವದೋ ಕತ್ತೆ ? "

ರಾಮನು ಸುಮ್ಮನಾದನು.

ಮಾಸ್ತರರು "ಬಾಯಿ ಬಡಿಯುತ್ತೀಯಾ? ಚೇಷ್ಟೆ ಮಾಡುತ್ತೀಯಾ ? " ಎಂದು ಧಬ ಧಬ ಗುದ್ದಿದರು. ರಾಮನ ಇಷ್ಟೊತ್ತು ಬಿಗಿದಿಟ್ಟಿದ್ದ ದುಃಖವು ದೊಡ್ಡ ದನಿಯಿಂದ ಹೊರಬಿದ್ದಿತು. ಪ್ರಲ್ಹಾದನಂತೂ ಹೌ ಹಾರಿ ಹೋದನು. ಮಾಸ್ತರರು ಮುಂದಿನ ಲೆಖ್ಖವನ್ನು ಹೇಳಿ ಯಾವದೋ ಪುಸ್ತಕವನ್ನು ಓದುತ್ತ ಕುಳಿತುಕೊಂಡರು.

ಅವರ ಮೋರೆ ಅತ್ತ ತಿರುಗುವದೊಂದೇ ತಡ, ಸಿಟ್ಟುಬೆಂಕಿಯಾಗಿದ್ದ ರಾಮನು " ಪಲ್ಯಾ–ಗೋಪ್ಯಾ–ಫಾಲಾ ಫೂ " ಎಂದನು.

" ಈ ಪಲ್ಯಾನಿಗೆ ಸೊಕ್ಕು ಬಂದಿದೆ "ಶೀನನಂದನು.

" ಪಾಪ ಪ್ರಲ್ಹಾದನೇನು ಮಾಡ್ಯಾನು ? " ಬಸವಂತನೆಂ

ಒಬ್ಬ ಹತ್ತಿರದ ಹುಡುಗನಂದನು.

"ನೀನೂ ಅವನನ್ನು ಏರಿಗಟ್ಟಿಕೊಂಡು ಬರುವಿಯಾ ? ನಿನ್ನ ಪಾಲಾನೂ ಫೂ" ಶೀನನಂದನು

ರಾಮನೂ 'ಪಾಲಾ ಫೂ' ಎಂದನು ಬಸವಂತನು ಪಾಪ ಸುಮ್ಮನಾದನು. ಪ್ರಲ್ಹಾದನಂ ಮೋರೆಯನ್ನೇ ಮೇಲಕ್ಕೆತ್ತಲಿಲ್ಲ ಪಾಟಿಯ ಮೇಲೆ ಬೀಳುತ್ತಿರುವ ಕಣ್ಣೀರ ಹನಿಗಳನ್ನು ಒರಿಸುತ್ತಾ ಸುಮ್ಮನೆ ಕೂತುಬಿಟ್ಟನು.

ಎಲೇ ಕೋಪವೇ ! ನೀನು ನಿಜವಾಗಿ ಪಾಪದ ನೆರೆಗಟ್ಟು "ಪಾಲಾ ಫೂ" ! ಎಲೇ ವಿಷಸೂತ್ಕಾರವೇ ! ನೀನು ಎಷ್ಟೋ ಆನಂದವಲ್ಲಿಗಳನ್ನು ಕಮರಿಸಿಬಿಟ್ಟಿರುವಿ ! ಪಂಜಾಬಿನ ಆ ಸೊಗಸಿನ ಬಳ್ಳಿರಿ ಎತ್ತ ! ಮಧ್ಯಾಹ್ನದ ಈ ಕೋಪದ ದಳ್ಳುರಿ ಎತ್ತ !

೩

"ಛಿ ನಾಯಿ ! ನಾಚಿಕೆಗೇಡಿ, ಬೇಡೆಂದರೂ ನಮ್ಮ ಹಿಂದಿಂದೇ ಬರುತ್ತದೆ" ಎಂದು ತಿರಸ್ಕಾರವ್ಯಂಜಕ ನಗೆಯಿಂದ, ರಾಮನ ಹೆಗಲ ಮೇಲೆ ಕೈಹಾಕಿದ ಶೀನನು ಪ್ರಲ್ಹಾದನಿಗೆಂದನು.

"ಪ್ರಲ್ಹಾದ ! ಹುಣಚೀ ಚಿಗುರು ತಗೊಂ ಬಾ" ಬಸವಂತನು ಒದರಿ ಕರೆದನು ಪ್ರಲ್ಹಾದನ ಮನದಲ್ಲಿ ಬೇರೊಂದು ವಿಚಾರ ಬಂದು ಅವನು ಓಡುತ್ತ ಮನೆಗೆ ಹೋದನು.

"ಕಣ್ಣೊಳಗೇಕ ನೀರು ? ಬಿಸಿಲೊಳಗೇಕೆ ಬಂದಿ ? ತಡವಾಯಿತೇನು ? ಮಾಸ್ತರರು ಹೊಡೆದರೇನು ? ಅಭ್ಯಾಸ ಮಾಡಿದ್ದಿಲ್ಲೇನು? ಇನ್ನು ಸಾಲಿಗೆ ಹೋಗುವದಿಲ್ಲವೇನು ? ಪಾಟಿ – ಪುಸ್ತಕ ಯಾಕೆ ಬಿಟ್ಟುಬಂದಿ ? ಯಾಕೆ ? ಮಾತಾಡು ?" ಎಂದು ಮನೆಗೆ ಬರುತ್ತಲೆ ಕಮಲಾಬಾಯಿಯು ನೂರೆಂಟು ಪ್ರಶ್ನೆಗಳನ್ನು ಕೇಳಿದಳು. ಪ್ರಲ್ಹಾದನು ದಮ್ಮು ಕಡಿಮೆಯಾಗುತ್ತಲೇ ನಸುನಗುತ್ತ 'ಫರಾಳ ತಯಾರಾಯಿತೇನು ?' ಎಂದು ಕೇಳಿದನು

" ಯಾಕೆ ಇಷ್ಟರಲ್ಲಿ ಹಸಿವೆಯಾಯಿತೇನು ? " ನಗುತ್ತಂದಳು.

' ಆಗಿದೆಯೋ ಇಲ್ಲವೋ ? '

' ಆಗಿದೆ, ಎಲ್ಲ ಆಗಿದೆ; ಯಾಕೆ ? '

" ಇಷ್ಟೇ ಬೇಕಾಗಿತ್ತು. ಹೊತ್ತಾಯಿತು, ಸಾಲಿಗೆ ಹೋಗುತ್ತೇನೆ " ಎಂದು ಮತ್ತೆ ಓಡುತ್ತಾ ಸಾಲೆಗೆ ಹೊರಟನು.

" ಮೆಲ್ಲಗೆ ಹೋಗು, ಓಡಬೇಡ " ಎಂದು ಕಮಲಾಬಾಯಿಯು ಬಾಗಿಲಿಗೆ ಬಂದು ಒದರುವದರೊಳಗಾಗಿ ಅವನು ಕಾಣದಾಗಿದ್ದನು.

ಇನ್ನೂ ಒಂದಕ್ಕೆ ಬಂದ ಹುಡುಗರು ಒಳಗೆ ಹೋಗಿದ್ದಿಲ್ಲ. ಬಸವಂತನಿಗೆ ಶೀನನು ಚೇಷ್ಟೇಮಾಡುತ್ತಿದ್ದನು. ಪ್ರಲ್ಹಾದನು ಬಂದದ್ದು ಕಾಣುತ್ತಲೇ ಬಸವಂತನು ಅವನ ಕಡೆಗೆ ಹೋದನು. " ಎರಡೂ ಅವ್ವಾಳಿ ಕೂಡಿದವೋ ಕೂಡಿದವು ! " ಎಂದು ಶೀನನು ಚಪ್ಪಾಳೆಯಿಕ್ಕಿದನು. ರಾಮನೂ ನಕ್ಕನು. ಆದರೆ ಪ್ರಲ್ಹಾದನಿಗೆ ಮಾತ್ರ ಶೀನನಿಲ್ಲದಿದ್ದರೂ ರಾಮನಾದರೂ ತನ್ನ ಕೂಡ ಮಾತಾಡಿಕೊಂಡಂತೆ ತೋಟಕ್ಕೆ ಬರಬಹುದೆಂದು ತಿಳಕೊಂಡು ಗುರುಗಳ ಅಪ್ಪಣೆ ಪಡಕೊಂಡು ೪ ಘಂಟೆಗೇ ಮನೆಗೆ ಬಂದನು. ಅವನ ಹಿಂದಿನಿಂದ ರಾಮನೂ ಶೀನನೂ ಇಬ್ಬರೂ ಹೊರಗೆ ಬಂದರು ಅಂತೆಯೇ ಪ್ರಲ್ಹಾದನಿಗೆ ಅವರು ಬರುವರೆಂದೆನಿಸಿ ' ರಾಮೂ ಬರುತ್ತೀಯಾ ? ' ಎಂದು ಕೇಳಿದನು

' ನಮಗೆ ಗೊತ್ತಿಲ್ಲ. ' ಎಂದು ರಾಮನಂದನು.

" ಹೇಗೆ ಮಾತನಾಡಿಸುತ್ತದೆ ನೋಡು ನಾಚಿಕಿಲ್ಲದ್ದು ! " ಶೀನನು ಕೊಳಕು ನುಡಿದನು.

ಪ್ರಲ್ಹಾದನು ಏನೂ ಮಾತನಾಡದೇ ತಮ್ಮ ಮನೆಯ ಕಡಗೆ ಹೋದನು. ಹಿಂದೆ ತಿರುಗಿ ಒಂದೆರಡು ಸಲ ನೋಡಲು ರಾಮನೂ ಶೀನನೂ ಅತ್ತ ಬರುತ್ತಿರುವದನ್ನು ಅವನು ಕಂಡನು.

೬

ಪ್ರಲ್ಹಾದನು ರಾಮನ ಹಾದಿಯನ್ನು ನೋಡೇ ನೋಡಿದನು,

ಈ ಹಾದಿಯಿಂದ ಬಂದಾರು, ಆ ಹಾದಿಯಿಂದ ಬಂದಾರು ಎಂದು ಎಷ್ಟೊತ್ತು ಅತ್ತಿತ್ತ ನೋಡುತ್ತ ಕುಳಿತರೂ, ರಾಮನ ಸುಳಿವೂ ಇಲ್ಲ. ಪ್ರಲ್ಹಾದನಿಗೆ ಕಪ್ಪುಕಪಾಳ ಹೊಡೆದಂತಾಗಹತ್ತಿತು. ಕುತ್ತಿಗೆ ಹಿಚುಕಿದಂತಾಗಹತ್ತಿತು. ಅವನ ಮೋರೆಯ ಕಡೆಗೆ ಮಿಕಿಮಿಕಿ ನೋಡುತ್ತ ಹತ್ತಿರ ಕುಳಿತಿರುವ ನಾಯಿಯ ನಂಬಿಗೆ ತುಂಬಿಸುವ ಕಣ್ಣುಗಳನ್ನು ನೋಡಿ ಮನುಷ್ಯನ ಕೃತಘ್ನತೆಯ ಏನೋ ಅನುಭವ ಬಂದಂತಾಗಿ ಆ ನಾಯಿಯ ಬೆನ್ನಮೇಲೆ ಮೋರೆ ಇಟ್ಟು ಪ್ರಲ್ಹಾದನು ಅಳಹತ್ತಿದನು "ನಾನು ಏನು ಮಾಡಿದ್ದೇನ ? ರಾಮನಿಗೆ ಇಷ್ಟು ಒಲ್ಲೆಯಾದೆನೇ ? ನನ್ನನ್ನು ಇಷ್ಟು ನಗೆಗೇಡುಮಾಡಬೇಕೇ ? ಪ್ರೀತಿಗೀತಿಗಳೆಂಬ ಎಲ್ಲಮಾತು ಸುಳ್ಳೇ ಸುಳ್ಳೆ ? ಶೀನನು ಅವನಿಗೆ ಹೆಚ್ಚಿನವನಾದನೇ ? ಇನ್ನು ಯಾರ ಗೆಳೆತನವೂ ಬೇಡ ಸಲಿಗೆ ಬೇಡ, ಸಹವಾಸ ಬೇಡ; ಮಾತು ಬೇಡ, ಕಥೆ ಬೇಡ. ನನ್ನಷ್ಟಕ್ಕೆ ನಾನಿದ್ದರಾಯಿತು !" ಇದೇ ಬಗೆಯ ಅನೇಕ ವಿಚಾರಗಳಲ್ಲಿ ಅವನಿರಲು ಅವನ ಹಿಂದೆ ಒಬ್ಬಿಬ್ಬರ ಕಾಲಸಪ್ಪಳವಾದಂತಾಯಿತು. ಪ್ರಲ್ಹಾದನಿಗೆ ರಾಮನೂ ಶೀನನೂ ಬಂದಿರಲಿಕ್ಕೇಬೇಕೆಂದೆನಿಸಿತು ತಾನು ಅವರ ಮೇಲೆ ಸುಳ್ಳೇ ತಪ್ಪು ಹೇರಿಸಿದೆನೆಂದು ಅವನಿಗೆ ಕೆಟ್ಟೆನಿಸಿತು. ತನ್ನನ್ನು ಅವರೇ ಎಬ್ಬಿಸಲೆಂದು ಪ್ರಲ್ಹಾದನು ಸುಮ್ಮನೇ ಮಲಗಿಕೊಂಡನು ಘರಾಳದ ಗಂಟು ಬಿಚ್ಚಹತ್ತಿದಂತೆ ಅವನಿಗೆ ಅನಿಸಿತು. ಅವನು ಬೇಕಂತೆ ಮಲಗಿಕೊಂಡವನಂತೆ ನಟಿಸಿದನು ಆದರೆ ಅವನ ಭ್ರಮವು ತೀವ್ರವೇ ಬಯಲಾಯಿತು.

ಹತ್ತರಿನ ಹೊಲದವರ ಎರಡು ನಾಯಿಗಳು ಅಡ್ಡಾಡುತ್ತ ಸಹಜ ಅಲ್ಲಿಗೆ, ಬಂದು ದಶಮಿಯ ಗಂಟಿನ ವಾಸನೆ ಒಡಿದು ಆ ಗಂಟಿಗೆ ಬಂದು ಗಂಟುಬಿದ್ದವು. ಆ ಗಂಟಿನ ಗಂಟು ಬಿಚ್ಚಲಿಕ್ಕೆ ಬರದ್ದರಿಂದ ಅವು ಕುಂಯಿಗುಡಹತ್ತಿದವು. ಇವನ್ನು ಕೇಳುತ್ತಲೆ ಪ್ರಲ್ಹಾದನು ಎದ್ದು ಕುಳಿತನು, ನಾಯಿಗಳು ದೂರ ಸರಿಸರಿದವು. ಈ ಪ್ರಸಂಗದಲ್ಲಿ ಪ್ರಲ್ಹಾದನಲ್ಲದೆ ಮತ್ತೆ ಬೇರೆ ಯಾರಾದರೂ ಇದ್ದರೆ ಅಥವಾ ಪ್ರಸಂಗವೇ ಬೇರೆ ಯಾವದಾದರೂ ಇದ್ದರೆ

ಪ್ರಲ್ಹಾದನೇ ನಗಬಹುದಾಗಿತ್ತು. ಆದರೆ ಈಗ ಪ್ರಲ್ಹಾದನು ಹೆಚ್ಚು ಗಂಭೀರನಾದನು. ಜಂಭ ಬಡೆಯುವ ಗೆಳೆಯರಕ್ಕಿಂತ ಈ ನಾಯಿಗಳಿಗೆ ಆ ಫರಾಳವನ್ನು ಹಾಕುವದು ಹೆಚ್ಚು ಯೋಗ್ಯವಾದೀತೆಂದು ಹೊಳೆಯಿತು. ಅವನು ಸಿಟ್ಟಿಗೆ ಏಳದ್ದು ಕಂಡು, ನಾಯಿಗಳು ಅವನ ಕಡೆಗೆ ನೋಡುತ್ತ ಅಲ್ಲೇ ನಿಂತುಕೊಂಡಿದ್ದವು ಈಗ ಪ್ರಲ್ಹಾದನು ಗಂಟನ್ನು ಬಿಚ್ಚಿದನು ಅವನು ಏನೋ ನಿಶ್ಚಯ ಮಾಡಿದಂತೆ ತೋರಿತು. ಅವನು ಒಂದೊಂದು ಬೆಲ್ಲದ ಹೋಳಿಗೆಗಳನ್ನು ಆ ನಾಯಿಗಳ ಮುಂದೆ ಚಲ್ಲಿದನು ಒಂದೊಂದು ಹಿಡಿ ಅವಲಕ್ಕಿಯನ್ನೂ ಅವುಗಳ ಮುಂದೆ ಹಾಕಿದನು. ಇದನ್ನು ಕಂಡು ಖಂಡ್ಯಾನು ವೈಯೂರಿದು ಎದ್ದು ನಿಂತನು. ಆದಕ್ಕೂ ಪ್ರಲ್ಹಾದನು ಬೆಲ್ಲದ ಹೋಳಿಗೆಯನ್ನು ಅವಲಕ್ಕಿಯನ್ನೂ ಹಾಕಿದನು. ಆ ನಿಷ್ಪಾಪ ಪ್ರಾಣಿಗಳು ನಿರ್ಭಯದಿಂದಲೂ ಪ್ರೀತಿಯಿಂದಲೂ ಅದನ್ನು ತಿನ್ನಹತ್ತಲು ಪ್ರಲ್ಹಾದನು ಅದನ್ನೇ ನೋಡುತ್ತ ಏನೋ ವಿಚಾರದಲ್ಲಿ ಮಗ್ನನಾಗಿ ಕೂತು ಬಿಟ್ಟನು.

ಸಾಯಂಕಾಲವು, ಗೆಳೆಯರು ಹಾಲುಬಿಟ್ಟಿದ್ದರಿಂದ ಒಬ್ಬಂಟಿಗನಾಗಿ ಕೂತಿರುವ ಹುಡುಗನಂತೆ, ನಾಚಿಕೆ ಮನಸ್ತಾಪಗಳಿಂದ ಮೋರೆ ಕಂಪಗೆ ಮಾಡಿಕೊಂಡು ಕತ್ತಲಗವಿಯುತ್ತಿರುವ ತಲೆಯಲ್ಲಿ ಚಿಕ್ಕಿಯಷ್ಟಾದರೂ ಬೆಳಕು ಕಾಣುತ್ತದಯೋ ಏನು ನೋಡಬೇಕೆಂದು ಬಗೆಬಗೆಯ ಬಗಗಳಲ್ಲಿ ತೊಡಗಿರುವಂತೆ ತೋರುತ್ತಿತ್ತು.

ಈ ಹೊತ್ತಿನಲ್ಲಿ ಪ್ರಲ್ಹಾದನ ಮನಸ್ಸಿನಲ್ಲಿ ಅನೇಕ ಕೆಟ್ಟ ಕೆಟ್ಟ ವಿಚಾರಗಳು ಬರಹತ್ತಿದವು "ರಾಮನಾದರೂ ಸತ್ತು ಹೋಗಬೇಕು, ಶೀನನಾದರೂ ಸತ್ತು ಹೋಗಬೇಕು, ತಾನಾದರೂ ಸತ್ತು ಹೋಗಬೇಕು. ರಾಮನಿಗೆ ವಿಲಿ ವಿಲಿ ಒದ್ದಾಡುವಂತೆ ಏನಾದರೂ ಸಂಕಟವಾಗಬೇಕು' ತಾನು ಏನಾದರೂ ಬೇರು ಒಯ್ದು ಕೊಟ್ಟು ಅದನ್ನು 'ಕಡಿಸಿ ಮಾಡಬೇಕು ರಾಮನು ಬಹಳ ನಾಚಿಕೆಗೊಂಡು ಕಡೆಗೆ ತಾನಾಗಿ ಇವನನ್ನು ಮಾತಾಡಿಸಲಿಕ್ಕೆ ಬರಬೇಕು ಏನು

ಮಾಡಿದರೂ ತಾನು ಮಾತಾಡಬಾರದು ಕಾಲು ಬೀಳುತ್ತೇನೆಂ ದರೂ ಮಾತಾಡಿಸಬಾರದು. ತನಗೆ ಈಗಾಗುವ ಸಂಕಟದ ಸಾವಿರ ಪಾಲು ಸಂಕಟವು ಅವನಿಗಾಗಬೇಕು, ಅವರ ಮನೆಯವರೆಲ್ಲರೂ ಬಂದು ಹೇಳಿಕೊಂಡರೂ ತಾನು ಮಾತಾಡಿಸಬಾರದು" ಹೀಗ ಅನೇಕ ವಿಚಾರಗಳು ಕತ್ತಲಾಗುತ್ತಲೇ ಕಾವ್ ಕಾವ್ ಎಂದು ಕಲಕಲ ಮಾಡುತ್ತ ಗಿಡಗಳ ಮೇಲೆ ಗಂಪುಗೂಡುವ ಕಾಗೆಳಗ ಹಿಂಡಿನಂತ ಗಲಾಟೆ ಮಾಡಹತ್ತಿದವು.

ಇತ್ತ ಮೂರು ನಾಯಿಗಳು ಕೂಡಿ ಅವನ ಮುಂದಿನ ಫರಾಳ ವನ್ನೂ ತೀರಿಸಿ ಬಿಟ್ಟಿದ್ದವು. ಅದನ್ನು ನೋಡಿ ಅವನಿಗೆ ಒಂದು ಬಗೆಯ ಸಮಾಧಾನವಾಯಿತು. ಇನ್ನೂ ಅವನ ಕಣ್ಣೊಳಗಿಂದ ನಡುನಡುವೆ ನೀರು ತಟಗುಟ್ಟುತ್ತಿತ್ತು ಅವನಿಗ ಅವನ ವ್ವಯಲ್ಲಿ ಕಾಯ್ದಂತೆ ಅನಿಸಹತ್ತಿತು ಅಷ್ಟರಲ್ಲಿ ಅವನಿಗೆ ಮನೆಗ ಹೋಗುವ ನನಪಾಗಿ ಬೆಚ್ಚಿದಂತಾಗಿ ಅವನು ಎದ್ದನು ಅಷ್ಟರಲ್ಲ ತೋಟಿಗನೂ "ರಾಯರ! ಇನ್ನೂ ಇಲ್ಲೇ ಇದ್ದೀರೀನು? ಅವ್ವಾ ಅವರು ಹಾದೀ ನೋಡುತ್ತಾರೆ ಹೋಗರಿ, ಲಗೂ ಹೋಗಿರಿ" ಎಂದು ಹೇಳಿದನು. "ಭರಮ್ಮಾ, ಏಕೋ ನನಗೆ ಜ್ವರ ಬಂದಂತನಿಸುತ್ತದೆ. ನೀನೂ ಸಂಗಡ ಬರುವಿಯಾ?" ಎಂದು ಪ್ರಲ್ಹಾದನು ಕೇಳಿದನು ಭರ ಮನು ತಡಮಾಡದೆ ಪ್ರಲ್ಹಾದನನ್ನು ಎತ್ತಿಕೊಂಡೇ ಮನಯ ಕಡೆಗೆ ಹೊರಟನು.

೭

ಎರಡು ದಿವಸಗಳಾದವು ಪ್ರಲ್ಹಾದನನು ಸಾಲೆಗೆ ಬರಲಿಲ್ಲ ಶೀನನೂ ರಾಮನೂ ಪ್ರಲ್ಹಾದನ ಹಾದಿಯನ್ನು ಕಾಯ್ದರು 'ಜ್ವರ ಬಂದಿವೆ' ಎಂದು ಯಾರೋ ಹೇಳಿದರು. "ಇಂದಿಲ್ಲ ನಾಳೆ ಬಂದಾನು" ಎಂದು ಬಸವಂತನನ್ನೇ ಆಗೀಗ ಕಾಡುತ್ತ ಎರಡ್ರ ಎರಡು ದಿವಸಗಳನ್ನು ಕಳೆದರು. ಶೀನನಿಗೆ ಹುಡುಗರನ್ನು ಕಾಡು

ವದೊಂದು ಆಟವೇ ಆಗಿತ್ತು. ರಾಮನಿಗೆ ಮಾತ್ರ ಒಂದೊಂದು ದಿವಸ ಕಳೆಯುವದು ಜೀವದ ಸಂತ್ರು ಬಂದಂತಾಗಿತ್ತು. 'ಪ್ರಲ್ಹಾದನು ಯಾವಾಗ್ಗೆ ಬಂದಾನೋ ಏನಾದರೂ ಕಾರಣಮಾಡಿ ತಾನು ಅವನ ಕೂಡ ಯಾವಾಗ ಮಾತಾಡೆನೋ' ಎಂದು ಅವನಿಗೆ ಅನಿಸಿತು.

ಪ್ರಲ್ಹಾದನಿಗೆ ಬಹಳ ಜಡ್ಡಾಗಿರುವದೆಂದೂ, ಜ್ವರ ಬಹಳ ಕೆಟ್ಟವೆಂದೂ ಮನೆಯಲ್ಲಿ ಮಾತಾಡುವದನ್ನು ರಾಮನು ಕೇಳಿದನು. ಅಂದೇ ಬೆಳಗಿನ ಕನಸಿನಲ್ಲಿ "ನೀನು ಪಾಲಾ ಫೂ ಮಾಡಿದರೂ ನಾನೇನು ಮಾಡಿಲ್ಲ" ಎಂದು ಪ್ರಲ್ಹಾದನು ಅಂದಂತಾಗಿತ್ತು. ಪ್ರಲ್ಹಾದನ ಮನೆಗೆ ತಾನಾಗಿ ಹೋದರೆ ಎಲ್ಲಿ ನಾಚಿಕೆಗೇಡು ಆಗುವದೋ ಅವನ್ನು ಅಪ್ಪಿತಪ್ಪಿ ಶೀನನು ಕಂಡರೆ ಎಲ್ಲಿ ಚೇಷ್ಟೆ ಮಾಡುವನೋ ಎಂದು, ಹೋಗಬೇಕೋ ಹೋಗಬಾರದೋ ಎಂಬ ವಿಚಾರದಲ್ಲಿ ರಾಮನು ಇದ್ದನು. "ಇದೇನಾಯಿತಿದು! ಫಟ್ ಎಂದೊಡನೆ ಬ್ರಹ್ಮಹತ್ಯೆ! ನಾನು ಪಾಲಾ ಬಿಟ್ಟಾಗ ಅವನು ಬೇಗನೆ ಬೀಳಬೇಕೇ?" ಹೀಗೊಂದು ಅವನಿಗೆ ವಿಚಾರ ಬಂದಿತು. "ಶೀನ! ಕೆಟ್ಟ ಶೀನ! ದೆವ್ವ ಶೀನ! ಅವನೇ ನನ್ನದೂ ಪ್ರಲ್ಹಾದನದೂ ಕೆಡಿಸಿದವ" ಹಿಗೂ ಒಂದು ವಿಚಾರ ಬಂತು. ಈ ವಿಚಾರ ಬರುತ್ತಲೇ ಪ್ರಲ್ಹಾದನ ಮನೆಗೆ ಹೋಗಬೇಕೆಂದು ಗೊತ್ತುಮಾಡಿಕೊಂಡನು. ಆದರೂ ಹಗಲು ಹೋಗುವ ಮನಸಾಗಲೊಲ್ಲದು. ಸಂಜೆಯಾಗುತ್ತಲೇ ಹೋಗಬೇಕೆಂಬುವದೇ ರಾಮನ ಮನಸು.

ಇಂದು ಜ್ವರ ಬಂದು ಮೂರನೇ ದಿವಸ. ಚತುರ್ದಶಿ ಸಂಜೆಯಾಗಿದೆ. ಚಂದಪ್ಪನಿನ್ನೂ ಬಂದಿಲ್ಲ. ರಾಮನು ಅವರ ಮನೆಯೊಳಗೆ ಹೋಗಬೇಕೋ ಹೋಗಬಾರದೋ ಎಂದು ಹೊರಗಿಂದ ಹೊರಗೆ ಅಡ್ಡಾಡುತ್ತಿದ್ದನು. ತಾನು ಎರಡು ದಿವಸ ಅವರ ಮನೆಗೇ ಹೋಗಿಲ್ಲ. ಇಂದು ನಾಚಿಕೆಗೇಡಿಯಂತೆ ಹೋಗುವದು ಹೇಗೆ? ಪ್ರಲ್ಹಾದನು ತನ್ನನ್ನು ಮಾತಾಡಿಸಬಹುದೇ?" ಇವೇ ಮೊದಲಾದ ವಿಚಾರ ಮಾಡುತ್ತ ಕಡೆಗೊಮ್ಮೆ ಅವರ ಮನೆಯನ್ನು ಸೇರಿದನು

ಮನೆಯಲ್ಲೆಲ್ಲ ಶಾಂತವಿತ್ತು. ಒಂದೇ ಒಂದು ಮಿಣಿಮಿಣಿ ದೀಪ ರಾಮನು ಅಂಗಳವನ್ನು ದಾಟಿ ಒಳಗಿನ ಕಟ್ಟೆಯನ್ನು ಹತ್ತಿದನು ಒಳಗೆ ಏನಾದರೂ ನಡೆದದೆಯೋ ಕಿವಿಗೊಟ್ಟು ಕೇಳಬೇಕೆಂದು ಕಿವಿಗೊಟ್ಟನು. ಎಲ್ಲ ನಿಸ್ತಬ್ಧ! ಮತ್ತೊಂದು ಹಜ್ಜೆ ಮುಂದ ಕಿಟ್ಟನು. ಮನೆಯೊಳಗೆ ಯಾರಾದರೂ ಇರುವರೋ ಇಲ್ಲವೋ ಸಂಶಯ ಇನ್ನೊಂದು ಹೆಜ್ಜೆ ಮುಂದಕ್ಕಿಟ್ಟು ಇನ್ನು ಮುಂದೆ ಹೋಗಬೇಕೆನ್ನುವಷ್ಟರಲ್ಲಿ ರಾಮೂ! ರಾಮೂ! ಬಾ! ಬಾ!" ಎಂದು ಪ್ರಲ್ಹಾದನು ಮಾತದ ಭರದಲ್ಲಿ ಒದರಿದನು. ಅದನ್ನು ಕೇಳುತ್ತಲೇ ರಾಮನು ಹೆದರಿದವನೇ ಅಲ್ಲಿಂದ ಓಡಿ ಹೋದನು. ಹಿಂದಿಂದೆ ಸರಪಳಿಗೆ ಕಟ್ಟಿದ ನಾಯಿಯೂ ಒನ್ಮೆ ಒದರಿತು. ಮತ್ತೆ ಶಾಂತ. ಆದರೆ ರಾಮನು ಮಾತ್ರ ತನ್ನ ಮನಗೆ ಮುಟ್ಟುವವರೆಗೆ ಹಾದಿಯಲ್ಲೆಲ್ಲೂ ನಿಲ್ಲಲೇ ಇಲ್ಲ.

೮

ಶಾರಹುಣ್ಣಿವೆಯ ಬೆಳ್ದಿಂಗಳು ತರಳರ ತರಲ ಜೀವಕ್ಕೆ ಅಮಿತ ಆನಂದವನ್ನು ಕೊಡುತ್ತಿದೆ. ಹುಡುಗರು ಹಾರಾಡುತ್ತ ಚೀರಾಡುತ್ತ "ಹುಡುತುತ್ತು" "ತಿಳ್ಳಿ" ಮುಂತಾದ ಆಟಗಳನ್ನು ಆಡುತ್ತಿರುವರು. ಕೆಲವರು ಓಡುವರು, ಕೆಲವರು ಹಾಡುತ್ತಿರುವರು, ಕೆಲವರು ಬೈದಾಡುತ್ತಿರುವರು. ಆನಂದಮಯ ಪರಮೇಶ್ವರನು ಈ ಬಾಲಲೀಲೆಯನ್ನು, ಬೆಳ್ದಿಂಗಳೆಂಬ ರಮಣೀಯ ವಿರಟಿಹಾಸ್ಯದಿಂದ ಬೆಳಗಿ, ಚಂದ್ರನಾಗಿ ನೋಡುತ್ತಾಲಿದ್ದಾನೆ. ಹುಡುಗರು ಅವಿದಿತಾನಂದದಿಂದ ಆಗಾಗ್ಗೆ ಚಂದಪ್ಪನ ಕಡೆಗೆ ನೋಡುತ್ತಿರುವರು. ಅವರ ಇಂದಿನ ಆನಂದವು ಪೆಟ್ಟಿಗೆಯೊಳಗಿಂದ ಹೊರಗೆ ಬಿಡಲ್ಪಟ್ಟ ಪಾರಿವಾಳಗಳದಲ್ಲ ಆದರೆ ಅಡವೀ ಹಕ್ಕಿಗಳ ಹಿಂಡಿನದಾಗಿತ್ತು. ಇಂದೇಕೆ ಇಷ್ಟು ಆನಂದವೋ? ಎಂದು ಯಾರಿಗೂ ಅನಿಸುವಂತಿದೆ.

ನಾಳೆಯೇ ಆದಿತ್ಯವಾರ. ಸಾಲೆ ಇಲ್ಲ—ಅಭ್ಯಾಸವಿಲ್ಲ—ಬೇಗ ಏಳುವ ಒತ್ತಾಯವಿಲ್ಲ. ಇದೇ, ಇಷೇ ಆ ಹುಡುಗರ ಆನಂದದ ಗುಟ್ಟು—ನಾಳಿನದಿನ ತಮ್ಮದು, ನಾಳೆ ತಾವು ಅರಸರು; ಇಂದು ಬೇಕಾದಷ್ಟು ಹೊತ್ತಿಗೆ ಮಲಗಕೊಳ್ಳಬಹುದು, ನಾಳೆ ಬೇಕಾದಾಗ್ಗೆ ಏಳಬಹುದು, ಈ ಅನಿರ್ಭಂಧ ಸ್ವಾತಂತ್ರ್ಯದ ಮಧುರಾನುಭವ ದಿಂದಲೇ ಅವರಿಗೆ ಬೆಳ್ದಿಂಗಳು ಮತ್ತಿಷ್ಟು ಬೆಳಗಿ ಕಾಣುತ್ತಿರುವದು. ನಿದ್ದೆ ಹಾರಿಹೋಗಿರುವದು ಅಗೋ! ಇದೇ ಒಬ್ಬ ಮುದುಕಿಯು 'ಏನು ಕೀಸರಬಾಸರ ಇಟ್ಟಿರುವಿರಿ! ಊರೊಳಗೆ ನಿಮ್ಮ ಹೊರತು ಜನರಾರಾದರೂ ಇರುವರೋ ಇಲ್ಲವೋ? ಸುಡಲಿ, ಇವರ ಒದರಾಟ ದಿಂದ ನಿದ್ದೆ ಬಗವಲ್ಲದು' ಎಂದು ಬಾಗಿಲು ಇಕ್ಕಿಕೊಳ್ಳುತ್ತಿದ್ದಾಳೆ–ಅಲ್ಲಿ ನೋಡಿ!

ರಾಮನೂ ಶೀನನೂ ಹಿರೆಹುದ್ದರಿಯಾಗಿ ತಿಳ್ಳೀಯಾಟವನ್ನು ಹೂಡಿರುವರು ಪಾಪ! ಬಸವಂತನನ್ನು ಆಟದೊಳಗೆ ಕರೆದು ಕೊಳ್ಳದ್ದರಿಂದ ಇಷ್ಟೊತ್ತು ಹಾದೀ ನೋಡಿ ನೋಡಿ ದಣಿದು ಅವನು ಮನೆಯ ಹಾದಿಯನ್ನು ಹಿಡಿದಿರುವನು "ಭಿಮೂ ಔಟ್"- "ಸತ್ತಿಲ್ಲ"-'ಗೆರೀ ತುಳಿದಿ'- "ಹಿಂದಿಂದ ಹೊಡದಾ"– 'ಗೊಡ್ಡೋ ಗೊಡ್ಡು'- "ತಿರುಗುಪ್ಪು, ಹೊಳ್ಳುಪ್ಪು"- "ಬಂತುಪ್ಪು" 'ದೇವರಾಣಿಯೆಂದರೂ ನತ್ತಿಲ್ಲ' ಮುಂತಾದ ಗುಲ್ಲು ಬೊಬ್ಬೆಗಳು ಆಟಕ್ಕೆ ಬೇರೊಂದು ರುಚಿಯನ್ನು ತಂದಿರುವವು. ರಾಮನ ಮೇಲೆ ಎರಡು ಉಪ್ಪು ಹೊತ್ತಿರುವರಿಂದಲೋ ಏನೋ ರಾಮನ ಮೋರೆ ಸ್ವಲ್ಪ ಸಪ್ಪಗಾಗಿರುವದು ಎಲ್ಲರ ಕೂಗಿನಲ್ಲಿ ಕುಣಿಯುತ್ತಿರುವ ಉಲ್ಹಾಸವು ರಾಮನ ಕೂಗಿನಲ್ಲಿ ಕಂಡು ಬರ ಬರಲೊಲ್ಲದು. ಈ ಸರತಿ ರಾಮನ ಕಡೆಯವರು ಬಹಳೇ ಜಾಗ್ರತೆಯಿಂದ ಆಟವನ್ನು ಆಡಿದ್ದರಿಂದ ತಿರುಗುಪ್ಪಾಗಿ ತಿರುಗಿ ಎರಡನೆಯ ಮನೆಯುವರೆಗೆ ಉಪ್ಪು ಏರಿಬಂದಿತ್ತು. ರಾಮನು ಮೆತ್ತನ್ನ ಸ್ವರದಿಂದಲೇ "ಎಚ್ಚರ! ಎಚ್ಚರ" ಎಂದು ಆಗಾಗ್ಗೆ ಅನ್ನುತ್ತಿ ರುವನು. ಇಲ್ಲಿಯ ವರೆಗೆ ಬಂದ ಆಟವು ಎಲ್ಲ ಗೊಡ್ಡಾಗುವದೊ

ಎಂದು ‘ ಗಡಿಬಿಡಿ ಮಾಡಬೇಡಿರಿ ! ಇದ್ದಲ್ಲಿಯೇ ಇರ್ರಿ ! ನಾವು ಉಪ್ಪು ಒಯ್ಯುತ್ತೇವೆ ’ ಎಂದು ಮೇಲೆ ಬಂದವರು, ಜೀವದೊಳಗೆ ಜೀವವಿಲ್ಲದ ಅರಮರದ ಪೌಲಿಸಿಂದ ಸಮನಡುವೆ ಬೀರೆಯುವರಿಗೆ ಹೇಳುತ್ತಿರುವರು. ಇಷ್ಟರಲ್ಲಿ ರಾಮನು ನಡುವಿನಿಂದ ಹಾಯ್ದು ಹೋಗಬೇಕೆಂದು ಹವಣಿಸುತ್ತಿರಲು ಸರಮನೆಯನ್ನು ಕಟ್ಟುತ್ತಿರುವ ಶೀನನು ತನ್ನ ಉದ್ದ ಕೈಗಳಿಂದ ಅವನಿಗೆ ಹೊಡೆದು “ ರಾಮು ನತ್ತಾ, ರಾಮು ನತ್ತಾ, ಡುರ್ರೋ, ಡುರ್ರೋ, ” ಕುಣಿದಾಡಹತ್ತಿದನು ಎಲ್ಲರು ಬಿಗಿದು ಹಿಡಿದ ಉಸಿರು ಸಿಡಿದಾಗಿ ಬಿಟ್ಟು ಮೋರೆ ಕೆಳಗೆ ಹಾಕಿದರು ರಾಮನು ತೀರ ದಣಿದವನಂತಾಗಿ ‘ ಹೌದು ಸತ್ತೆ ಸತ್ತೆ ’ ಎಂದನ್ನುತ್ತ ಹತ್ತರಿನ ಮನೆಯ ಕಟ್ಟೆಯ ಮೇಲೆ ಒರಗಬೇಕೆಂದು ಹೋದನು.

ಅಷ್ಟರಲ್ಲಿ ‘ ಸರಿಯಿರಿ ಸರಿಯಿರಿ ’ ಎಂದೆನ್ನುತ್ತ ಕಡೆಯ ಮನೆಗಳನ್ನು ಕಟ್ಟಿದ ಹುಡುಗರು ಬಂದರು ಎಲ್ಲರೂ ಏನೆಂದು ಹಿಂದೆ ನೋಡುತ್ತಾರೆ ಒಂದು ಹೆಣವನ್ನು ಹೊತ್ತುಕೊಂಡು ಜನರು ಬರುತ್ತಿರುವರು. ಎಲ್ಲ ಹುಡುಗರೂ ಅದನ್ನು ನೋಡಿ ಹೆದರಿದರು. ಯಾವನೋ ಒಬ್ಬನು ‘ ರಾಮೂ ! ಪ್ರಲ್ಹಾದ ’ ಎಂದಂದನು ಅದನ್ನು ಕೇಳುತ್ತಲೇ ರಾಮನು ಆವೇಶ ಬಂದವನಂತೆ ಎದ್ದು ಅದರ ಕಡೆಗೆ ನೋಡಹತ್ತಿದನು.

ಹೆಣವು ಮುಂದೆ ಹೋಯಿತು ಆದರೆ ಆ ಪ್ರೇತಕಳೆಯು ಮಾತ್ರ ಬೆಳ್ದಿಂಗಳಕ್ಕೆ ಬಂದು ಬಡಿದುಕೊಂಡಿತು. ಇದೇ ಹೊತ್ತಿಗೆ ಒಂದು ಕರಿಯ ಮರಿಮೋಡವು ಚಂದ್ರನನ್ನು ಮುಚ್ಚಿಬಿಟ್ಟಿತು. ಆಯಿತು, ಕೆಲವರು ಹೆದರಿ, ಕೆಲವರು ನಿರುತ್ಸಾಹದಿಂದ, ಕೆಲವರು ಯಾಕೋ ಏನೋ, ಇಬ್ಬಿಬ್ಬರು ಮೂವಮೂವರಾಗಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ತನ್ನ ನೆರಳನ್ನೇ ನೋಡಿ ಅಂಜಿ ಚಿಟ್ಟನೇ ಚೀರಿ ನೆಲಹಿಡಿದುಕೊಂಡು ನಿಶ್ಚೇಷ್ಟನಾಗಿ ಬೀಳುವ ಬಾಲನಂತೆ ರಾಮನು ಕಾಲನೆಳೆಯುತ್ತ ಕಟ್ಟೆಯನ್ನು ಹಿಡಿದು ಒರಗಿಕೊಂಡನು. ಸ್ವಲ್ಪ ಹೊತ್ತಿನಲ್ಲಿಯೇ ಅವನು ಎದ್ದನು. ಒಳಗೆ ಅಂಜಿ

ಕೊಂಡಿದ್ದರೂ ಸಿಡುಗಿನ ಹಾವಳಿಯಿಂದ ಹಾಳುಬಿದ್ದ ಊರಿನೊಳಗಿನ ಓಣಿಯಂತೆ ಭಣಗುಟ್ಟುವ ಆ ಓಣಿಯಲ್ಲಿ ನೋಡಿ, ಇನ್ನು ಮೇಲೆ ಇಲ್ಲಿರುವದು ತರವಲ್ಲವೆಂದು, ಹೆಚ್ಚಿನ ಹೆದರಿಕೆಯಿಂದುಂಟಾದ ತಾತ್ಕಾಲಿಕ ಧೈರ್ಯದಿಂದೆದ್ದು ಝಪಝಪನೆ ಒಂದು ಕ್ಷಣದಲ್ಲಿ ತಮ್ಮಮನೆಯನ್ನು ಮುಟ್ಟಿದನು ಅಂದಿನ ರಾತ್ರಿ ಆವನಿಗೆ ಕನಸಿನಲ್ಲಿ ಪ್ರಲ್ಹಾದನು "ಪಾಲಾ ಹಿಡಿದೆಯಾ ?" ಎಂದು ಕೇಳಿದಂತಾಗಿದ್ದರಿಂದ ಹೆದರಿ ಚೀರಿ ಎದ್ದು ತಾಯಿಯ ಬಳಗೆ ಬಂದು ಮಲಗಿಕೊಂಡನು.

ಆದಿತ್ಯವಾರದ ಮುಂಜಾವು ರಾಮನು ತಡವಾಗಿಯೇ ಎದ್ದಿದ್ದರೂ ಎಲ್ಲ ಸಾಲೆಯ ಹುಡುಗರಿಗೆ ಅಂದು ಅನಿಸುವ ಆನಂದ ಆವನಿಗೆ ಅನಿಸಲಿಲ್ಲ ಅವನು ಮೋರೆತೊಳೆದುಕೊಂಡು ಮೊದಲು ಬಸವಂತನ ಮನೆಗೆ ಹೋದನು ಪಾಪ! ಆವನಿಗೆ ಇವನಾಗಿ ಮನೆಗೆ ಯಾಕೆ ಬಂದನೋ ತಿಳಿಯಲೇ ಇಲ್ಲ ರಾಮನು ಜಾಣತನ ಬಲವುಳ್ಳವನು, ತಾನು ಅಷ್ಟು ಜಾಣನೂ ಅಲ್ಲ, ಕಸುವುಳ್ಳವನೂ ಅಲ್ಲ ತಾನಾಗಿ ಪಾಲಾ ಬಿಟ್ಟು ತಾನಾಗಿ ಪಾಲಾ ಹಿಡಿಬಾನೆಂದು ಬಸವಂತನು ಕನಸುಮನಸಿನಲ್ಲಿಯೂ ಅನಿಸಿದ್ದಿಲ್ಲ ರಾಮನಂತೂ ಅವನ ಪುಸ್ತಕಗಳನ್ನು ನೋಡುತ್ತ ಒಬ್ಬ ಜೀವದ ಗೆಳೆಯನಂತೆ ಮಾತನಾಡುವದರಲ್ಲಿ ತೊಡಗಿದನು ಬಸವಂತನು ಸಂಶಯದಲ್ಲಿದ್ದರೂ ಒಂದು ಬಗೆಯ ಸಮಾಧಾನವೆನಿಸಿ ರಾಮನ ಕೂಡ ಮಾತಾಡಹತ್ತಿದನು. ಹತ್ತು ಹೊಡೆದು ಹೋಯಿತು. ಹನ್ನೊಂದಾಯಿತು ಹನ್ನೆರಡಾಯಿತು. ರಾಮನ ಮನೆಯವರು ಅವನನ್ನು ಎಲ್ಲ ಕಡೆಗೆ ಹುಡುಕಿ ಹುಡುಕಿ ಕಡೆಗೆ ಇಲ್ಲಿಗೆ ಬಂದು ಸ್ವಲ್ಪ ಸಿಟ್ಟಿನಿಂದ "ಸಾಕಾದವು ಹರಟೆ ರಾಯರು ಊಟಕ್ಕೆ ಬರಬೇಕು" ಎಂದರು ರಾಮನು ಅರೆನಾಚಿದವನಂತಾಗಿ ಅಲ್ಲಿಂದ ಎದ್ದು ಮನೆಗೆ ಹೋದನು.

   

ಶೀನ, ಬಸವಂತ ಇಬ್ಬರೂ ಕಾರಣಾಂತರಗಳಿಂದ ಊರು

ಬಿಟ್ಟು ಹೋದರು. ಅವರದೂ ರಾಮುನದೂ ಅಷ್ಟು ಗೆಳೆತನವೂ ಕೂಡಲಿಲ್ಲ ರಾಮುನು ತೀರ ಬದಲಾದನು. ಪುನರ್ಜನ್ಮ ಹೊಂದಿದನು. ಅವನ ಸ್ವಭಾವವು ಗಂಭೀರವಾಯಿತು. 'ಪ್ರಲ್ಹಾದನ ಕೂಡ ಅಲ್ಹಾದ ಹೋಯಿತು.' ಎಂದು ಎಂದಾದರೂ ಅನ್ನುತ್ತಿದ್ದನು. ಆ ಮಾತಿಗೆ ಇಂದು ಹತ್ತು ಹನ್ನೊಂದು ವರ್ಷಗಳಾಗಿ ಹೋಗಿರುವವು ಆದರೂ ರಾಮುನು ಪ್ರಲ್ಹಾದನ ತಾಯಿಗೆ ಮೋರೆ ತೋರಿಸಲು ಏನೋ ನಾಚುತ್ತಿದ್ದನು ಕಮಲಾಬಾಯಿಗೆ ಮತ್ತೊಬ್ಬ ಮಗನೂ ಹುಟ್ಟಿದನು ಅವನು ಈಗ ಒಂಬತ್ತು ವರ್ಷದವನಿರುವನು ರಾಮುನು ಇದೇ ವರ್ಷ ಬಿ ಎ ಪಾಸಾಗಿ ಬಂದನು ಪ್ರಲ್ಹಾದನ ಮನೆಗೆ ಹೋಗಲಾರದೆ ಹಾದಿಯಲ್ಲಿ ಪೆಟ್ಟಿಯಾದ ಅವನ ತಮ್ಮನ ಕೈಯಲ್ಲಿಯೇ ಪೇಡೆ ಕೊಟ್ಟು ಬಂದನು ಇಂದಿನವರೆಗ ಪ್ರಲ್ಹಾದನಂಥ ಮತ್ತೊಬ್ಬ ಗೆಳೆಯನೇ ಅವನಿಗೆ ಪೆಟ್ಟಿಯಾಗಲಿಲ್ಲ ಇದೇ ರಾಮುನಿಗೆ ಬಹಳ ಕೆಟ್ಟೆನಿಸುತ್ತಿತ್ತು. ನಿಷ್ಕಾರಣವಾಗಿ ಮಾಡಿದ ಮಿತ್ರದ್ರೋಹದ ಪಾತಕವು ತನಗೆ ಬಡೆದುಕೊಂಡಿತೋ ಎಂದು ಅವನಿಗೆ ಆಗಾಗ್ಗೆ ಅನಿಸುತ್ತಿತ್ತು ಆ ಪ್ರಸಂಗವು ನೆನಪಾಗುತ್ತಲೇ ಒಮ್ಮೊಮ್ಮೆ ತಾಸು ತಾಸಿನ ವರೆಗೆ ಅವನು ಅಳುತ್ತಿದ್ದನು. ತನ್ನ ಡೈರಿ (ದಿನಚರಿ) ಯಲ್ಲಿ ಈ ಒಂದು ಪದ್ಯವನ್ನು ಬರೆದಿದ್ದನು.

ಬಣ್ಣ ಸಕ್ಕರೆ ತಿಂದು ಬೆಳೆದ ಎಳೆಗೆಳೆತನದ ।
ಕಣ್ಣನೋಟದಿನ ಬೆಳಕು ಒಮ್ಮೆಗಿಲೆ ಕಳೆಗುಂದಿ ।
ಎಣ್ಣೆ ತೀರಿದ ದೀಪದಂತೆ ಹೋಯಿತು, ಬಿಟ್ಟು ಕತ್ತಲೆಯೊಳಗೂ ಬ್ಯಸನ್ನೆ, ।
ಹಣ್ಣನಾರಿಸಿ ಕುಳಿತೆ, ಕಮರಿ ಕಳಚಿದವು ಹೂ, ।
ಮಣ್ಣು ಗೂಡಿತು ಮತ್ತೆ ಪ್ರೀತಿ ಮಾಡಿದ ಮೂರ್ತಿ, ।
ಸಣ್ಣದ ಹೃದಯದೊಳು ಇನ್ನುಮೇಲಾದರೂ ಬಳಗು ಗೆಳೆತನದ ಬೆಳಕೇ ! ॥



# ಹಿರಿಯ ಕತ್ತಿ

  

ದೇಸಾಯರ ಮೂರು ಹೆಂಡಂದಿರು ತೀರಿಕೊಂಡಿದ್ದರು. ಮೊದಲನೆ ಹೆಂಡತಿ ದೊಡ್ಡ ನಾಡಗೌರ ಮನೆಯವಳು. ಅವಳಿಗೆ ಮಕ್ಕಳೇ ಆಗಿರಲಿಲ್ಲ ಕೊನೆಗೂ ಆಗಲಿಲ್ಲ. ಕೆಲವರು ಅವಳು ಸತ್ತಳು ಎನ್ನುತ್ತಾರೆ, ಬೇರೆ ಕೆಲವರು ಅವಳನ್ನು ಕೊಂದರು ಎನ್ನುತ್ತಾರೆ. ಏನಿದ್ದರೂ ದೇಸಾಯರಿಗೆ ಎರಡನೇ ಲಗ್ನಕ್ಕೆ ದಾರಿಯಾಯಿತು. ಲಗ್ನವೂ ಆಯಿತು ಮದುವೆಯಾಗಿ ಕೆಲವು ವರ್ಷಗಳಾದವು ದೇಸಾಯರು ತಮ್ಮ ಹೆಂಗಸಿನ ಮನೆಯಲ್ಲಿಯೇ ದಿನಗಳನ್ನೂ ಒಂದೆರಡು ವಾರಗಳನ್ನೂ ಕಳೆಯಹತ್ತಿದರು. ಕಡೆಗೆ ಅವರಿವರ ಬಾಯಿಂದ ದೇಸಾಯರ ಕಿವಿಗೂ ಮಾತು ಬಿದ್ದು ದೇಸಾಯಿತಿಯು ಬಸಿರಿದ್ದದ್ದು ನಿಜ ಎಂದಾಯಿತು. ದೇಸಾಯರು ಮತ್ತೆ ಮನೆ ಹಿಡಿದರು ಪಾಪ! ಕೈಗೆ ಬಂದ ಫಲ ಬಾಯಿಗೆ ಬರಲಿಲ್ಲ. ಹೆಂಡತಿಯು ಹಡೆಯಲಾರದೆ ಸತ್ತಳು. ಒಳ್ಳೆಯ ಡಾಕ್ಟರರು ಸಿಕ್ಕಿದ್ದರೆ ಉಳಿಯುತ್ತಿದ್ದಳು ಎಂದು ಊರ ಜೋಯಿಸರೆಂದರು. ದೇಸಾಯರು ಸ್ವತಃ ವೈದ್ಯನ ಮೇಲೆ ಕಿಡಿಕಿಡಿ ಬೆಂಕಿ ಕಾರಹತ್ತಿದ್ದರು. ಮನೆಯ ಅಡಿಗಿಯವಳು "ಆ ಹೊಟ್ಟೀ ನೋಡಿಯೇ ನಾನು ಹಿಗಾಗುವದೆಂದು ತಿಳಿದಿದ್ದೆ" ಎಂದು ಒಕ್ಕಲಗಿತ್ತಿಗೆಂದಳು. ಒಕ್ಕಲಗಿತ್ತಿ "ಅದ್ಯಾಕ ಬಿಡ್ರಿ, ಯಾರ್ದೊಟ್ಟೆನೂ ಹಾಂಗs ಇರೋದು" ಎಂದಳು, "ಅದು ಲಕ್ಷಣನೇs ಅಲ್ಲ" ಇವಳು ಅಂದಳು. ಮನೆಯ ಮಟ್ಟಿಗೆ ನ್ಯಾಯ ನಿರ್ಣಯವಾಯಿತು. ದೇಸಾಯರ ಹೆಂಗಸಿನ ಭಾಗ್ಯವು ಮತ್ತೆ ತೆರೆಯಿತು. ಊರನಾಲ್ಕು ಪ್ರಮುಖರು ಜೋಯಿಸರ ಅಧ್ಯಕ್ಷತೆಯಲ್ಲಿ ಕೂಡಿದರು ಊರ ಯಜಮಾನರು ಮಕ್ಕಳು

ಮಕ್ಕಳು ಎಂದು ಬಾಯ್ಬಾಯಿ ಬಡಕೊಳ್ಳುವಾಗ ತಾವೆಲ್ಲರು ಸುಮ್ಮ ನಿರುವದು ತರವಲ್ಲ ಎಂದು ಗೊತ್ತುಮಾಡಿದರು “ ಅವರಿಗೆ ಹೆಂಡತಿಯ ಲಾಭವಿಲ್ಲ, ಬೇರೆಯವರ ಮಕ್ಕಳನ್ನು ತಂದು ಯಾಕೆ ಬಲಿಗೊಡಬೇಕು ? ” ಎಂದು ಆದರೂ ಒಬ್ಬರು ಕೇಳಿದರು; ‘ ಹೆಂಡತಿ ಸಿಗಬೇಕು ಇಷ್ಟೇ ಅಲ್ಲ, ಅವರಿಗೆ ಮಕ್ಕಳೂ ಆಗಬೇಕು — ಹೀಂಗಿದೆ ಅವರ ಜಾತಕ ” ಎಂದು ಜೋಯಿಸರು ಆಶ್ವಾಸನ ಕೊಟ್ಟರು. ಗೋವಿಂದಭಟ್ಟ ಅಂದೇ ಯಾವದೋ ಊರಿಗೆ ಹೋದ, ಒಂದು ವಾರದೊಳಗಾಗಿ ಒಂದು ಹೆಣ್ಣು ಹಿಡಿದುಕೊಂಡು ಬಂದ. ಬೆಳೆದ ಹುಡುಗಿ; ಬಡವರ ಹುಡುಗಿ, ಆದರೆ ಭಂಗಾರದಂಥಹ ಹುಡುಗಿ ಹುಡುಗಿಗೆ ತಂದೆ ತಾಯಿ ಯಾರೂ ಇಲ್ಲ ಮಾವ ಎಂದು ಕರೆಯಿಸಕೊಳ್ಳುವವನೊಬ್ಬನು ಬಂದು ಮದುವೆ ಮಾಡಿಕೊಟ್ಟು ಹೋದನು. ಮದುವೆಯು ಊರ ಹತ್ತರಿನ ಪ್ರಾಣೇಶನ ಗುಡಿಯಲ್ಲಿ ಒಂದು ದಿವಸದಲ್ಲಿ ಆಯಿತು. “ ಸುಳ್ಳೇ ಅಡಂಬರ ಬೇಡ ” ಎಂದು ದೇಸಾಯರಂದಿದ್ದರು.

‘ ದೇಸಾಯರಿಗೆ ಗಡಿಬಿಡಿಯಾಯಿತು ’ ಕೆಲವರಂದರು.

‘ ಹೆಣ್ಣಿನಲ್ಲಿ ಹೊನ್ನು ಹೋಗುತ್ತಿತ್ತು, ಹೊನ್ನು ಇದ್ದಲ್ಲಿ ಹೆಣ್ಣು ಬಂತು ” ಎಂದರು ಕೆಲವರು

‘ ಹುಡುಗಿಯು ಹಣೆಯುಬರಹವೇನೋ ? ’ ಅಡಗಿಯುವಳೆಂದಳು

‘ ಮದುವೆಯಾಯಿತೋ ಇಲ್ಲೋ ನೋಡ್ರಿ !’ ಒಕ್ಕಲಗಿತ್ತಿ ಕೇಳಿದಳು.

ಯಾರೋ ‘ ಭಾಗ್ಯ ’ ಎಂದರು; ಯಾರೋ ‘ಹುಚ್ಚು, ಎಂದರು. ಊರ ಜನರ ಬಾಯಿ ಯಾರು ಹಿಡಿಯುಬೇಕು ? ಆದರೂ ಊರ ಪ್ರಸ್ತಕ್ಕೆ ಎಲ್ಲರೂ ಊಟಕ್ಕೆ ಬಂದಿದ್ದರು ಮುಂದೆ ಯಥಾ ಪ್ರಕಾರ ಎಲ್ಲವೂ ಆಯಿತು ನಾಲ್ಕು ತಿಂಗಳೊಳಗಾಗಿ ದೇಸಾಯತಿಯ ಭಾಗ್ಯವನ್ನು ಜನರು ಹೊಗಳಹತ್ತಿದರ. ‘ ಮೊದಲೇ ಚೆಲುವೆ ಅದರಲ್ಲಿ ಬಸಿರು ಬೇರೆ ! ” ಎಂದು ಊರ ಹೆಂಗಸರು ‘ ಆಕೆಯ ಸಹಜ ಸಿಂಗಾರ ಬಣ್ಣಿಸಿದರು ದೇಸಾಯರ ಮೂಗು ಮೇಲಾ

ಯಿತು. ಜೋಯಿಸರ ಮೀಸೆ ಮೇಲಾದವು "ಗಂಡು ಹಡೆಯು ತ್ತಾರೆ — ಗಂಡು! ಏನು ಜಿದ್ದು!" ಎಂದು ಭವಿಷ್ಯದ ನಾಲಿಗೆ ಉದ್ಗಾರವಾಯಿತು ದೇಸಾಯರ ಕೆಂಗಸು ಊರು ಬಿಟ್ಟು ಓಡಿಹೋದಳೋ ಊರವರೇ ಓಡಿಸಿದರೋ? ಯಾರು ಓಡಿಸಿಕೊಂಡು ಹೋದರೋ? ದೇಸಾಯರಿಗೆ ಅದರ ಚಿಂತೆ ಇರಲಿಲ್ಲ ದೇಸಾಯರು ದಿನದ ಲೆಕ್ಕ ಹಾಕಹತ್ತಿದರು. ಅವರ ಪರಂಪರಾಗತ ಆಸ್ತಿಗೆ ಪರಂಪರಾಗತ ಸಾಲಕ್ಕೆ ಪರಂಪರಾಗತ ಶ್ರಾದ್ಧಕ್ಕೆ ಒಬ್ಬ ಔರಸ ಬೇಕಾಗಿದ್ದನು ಅವರು ಮತ್ತೆ ಮತ್ತೆ ಜೋಯಿಸರನ್ನು "ಹೆಂಗಸರು ಒಂಬತ್ತು ತಿಂಗಳಿಗೆ ಹಡೆಯುವರೋ? ಹತ್ತು ತಿಂಗಳಿಗೊ?" ಎಂದು ಕೇಳುತ್ತಿದ್ದರು. ಅವರಿಗೆ ಏಳರಲ್ಲಿ ಹಡೆದರೂ ಬೇಕಾಗಿತ್ತು ಜೋಯಿಸರು "ಅದೆಲ್ಲಾ ಹೇಳಲಿಕ್ಕ ಬರೂದಿಲ್ಲಾ" ಎಂದರು; ದೇಸಾಯರು "ಗಂಡೇ ಹುಟ್ಟುವನು ಎಂದು ಹೇಗೆ ಹೇಳಿದಿರಿ?" ಎಂದು ಕೇಳಿದರು "ಅದು ಹಾಂಗೇ!" ಎಂದು ಗಾಂಭೀರ್ಯದಿಂದ ಉತ್ತರ ಬಂತು.

ದೇಸಾಯಿತಿ ಹತ್ತನೆ ತಿಂಗಳಲ್ಲಿ ಹಡದಳು ಹಡದದ್ದು ಹೆಣ್ಣು. ಸುಸೂತ್ರ ಹಡೆದಳು ಅಷ್ಟೆ ಸಾಕು — ಎಂದು ಅವರು ಗೆಲವಿನಲ್ಲಿದ್ದರು ಆದರೆ ಎಂಟನೆಯ ದಿವಸ ಜ್ವರ ಬಂದವು, ಹತ್ತನೆಯ ದಿವಸ ಹೆಚ್ಚಾಯಿತು. ಹದಿಮೂರನೆಯ ದಿವಸ ಹೆಂಡತಿ ಹಾದಿ ಹಿಡಿದಳು. ಕೂಸಿಗೆ ತೊಟ್ಟಿಲಕ್ಕೆ ಹಾಕುವ ದಿನಕ್ಕೆ ತಾಯಿ ಚಟ್ಟಕ್ಕೆ ಏರಲಿದ್ದಳು. ದೇಸಾಯರಿಗೆ ಅಳು ಬಂತು. ಆದರೆ ಅಳುವ ಕೂಸನ್ನು ನೋಡಿ ಸುಮ್ಮನಾದರು. ಮುಂದೆ ಆಗುವದೆಲ್ಲಾ ಆಯಿತು. ಸತ್ತವರು ಹೋದರು, ಇದ್ದವರು ಉಳಿದರು. ಮಾತು ಮಾತ್ರ ನಿಂತಿತು — "ದೇಸಾಯರಿಗೆ ಹೆಂಡತಿಯ ಲಾಭವಿಲ್ಲ!" ಯಾರು ಆಡಿದರೂ ಅದೇ ಮಾತು. 'ಯಾಕೆ ಜೋಯಿಸರೆ?' ಎಂದು ಕೆಲವರು ಹಂಗಿಸಿ ಕೇಳಿದರು. "ಆಗಿದ್ದು ಆಗಿರಲಿ. ಜಾತಕ ಸುಳ್ಳಲ್ಲ. ನೋಡ್ರಿ, ಮತ್ತೆ ಲಗ್ನ ಆಗುತ್ತದೆ" ಎಂದು ಮೀಸೆಯ ಮೇಲೆ ಕೈ ಹಾಕಿದರು. ಅಲ್ಲಿ ಮೀಸೆ ಇರಲಿಲ್ಲ ಅದು ಅವರ

ತಪ್ಪಲ್ಲ. ಅದೇ ಅವರ ತಂದೆ ತೀರಿಕೊಂಡಿದ್ದರು. ಆದರೆ ಜನರಿಗೇನು ? ನಗೆಯಾಡಲಿಕ್ಕೆ ಅದೂ ಸಾಕು.

ದೇಸಾಯರಿಗೆ ಹೇವ ಉಂಟಾಯಿತು, ಅವರು ಚಿಂತಿಸಿದರು. “ ಇದುವರೆಗೂ ಆಗಿದ್ದು ಲಗ್ನಕ್ಕಾಗಿ ಲಗ್ನ, ಅದರಲ್ಲಿ ಸ್ವಾರ್ಥವಿತ್ತು. ಈಗ ಕೂಸನ್ನು ನೋಡಿಕೊಳ್ಳುವವರು ಯಾರೂ ಬೇಡವೇ ? ಆಗಿ, ಆಗಿ, ಗಂಡುಸಂತತಿ ಬೇರೆ ಆಗಲಿಲ್ಲ. ಮನೆತನ ಮುಂದುವರಿಯುವದು ಹೇಗೆ ? ಇನ್ನು ತಾನು ಮದುವೆಯಾಗುವದು ಪರಾರ್ಥಕ್ಕಾಗಿ. ಮದುವೆಯಾಗುವ ವಯಸ್ಸು ತನ್ನದಲ್ಲ ನಿಜ. ಆದರೆ ತನಗಾಗಿ ಕೂಸೇಕೆ ಕೊರಗಬೇಕು ? ಮನೆಯೇಕೆ ಮುರಿಯಬೇಕು ?”

ಜನರು ತಮಗೆ ತಿಳಿದಂತೆ ಮಾತನಾಡುತ್ತಿದ್ದರು. “ ಈ ಹೆಂಡತಿ – ಹೊಡೆಕನಿಗಾರು ಹೆಣ್ಣು ಕೊಡುವರು ? ” ಕೊಲೆಗಡುಕನೆಂದಿದ್ದರೂ ದೇಸಾಯರಿಗೆ ಸಿಟ್ಟು ಬರುತ್ತಿದ್ದಿಲ್ಲ. “ ಅವರಿಗೆ ಮಂಗಳವಿರಬೇಕು — ಅಮಂಗಳ ! ” ಎಂದು ಯಾರೊ ಉತ್ತರ ಕೊಟ್ಟರೆಂದು ದೇಸಾಯರ ಕಿವಿಗೂ ಬಂದು ಮುಟ್ಟಿತು. ಜನರ ಕುಹಕತನವನ್ನು ಮುರಿಯುವದಕ್ಕಾದರೂ ತಾವು ಮದುವೆಯಾಗಬೇಕೆಂದು ಅವರು ನಿರ್ಧಾರ ಮಾಡಿದರು. ಜೋಲುಬಿದ್ದ ಮೀಸೆಗಳಿಗೆ ಹುರಿಹಾಕಿ ಮೇಲೆ ತುದಿ ಮಾಡಿದರು. ಇನ್ನು ಅವರು ಮದುವೆಯಾಗುವದು ಕೇವಲ ಪರಾರ್ಥಕ್ಕಾಗಿ !

೨

ಇದೇ ಹೊತ್ತಿಗೆ ಅವರೂರಿಗೆ ಅವರ ಪೂರ್ವದ ಗೆಳೆಯರಾದ ನರಸಿಂಗರಾಯರು ಹೆಣ್ಣು ನೋಡಲಿಕ್ಕೆ ಬಂದರು. ನರಸಿಂಗರಾಯರು ದೊಡ್ಡ ವತನದಾರು. ಹಾಯಕೋರ್ಟಿನಲ್ಲಿ ಅವರ ಎರಡು ವ್ಯವಹಾರಗಳು ನಡೆದಿದ್ದವು. ಜಿಬಟ ಖೇಮಜೀಯೇ ಅವರಿಗೆ ಇಪ್ಪತ್ತೆರಡು ಸಾವಿರ ಸಾಲ ಕೊಟ್ಟಿದ್ದ. ಅವರ ಉತ್ಪನ್ನ ಎಷ್ಟಿರಬೇಕು ? ಜನರಲ್ಲಿ ಪತ್ತೆಷ್ಟಿರಬೇಕು ? ನರಸಿಂಗರಾಯರ ಮನೆತನ ಹಳೆಯ ಮನೆತನ

ಎಲ್ಲರಿಗೂ ಬೇಕಾದ ಮನೆತನ. ನರಸಿಂಗರಾಯ ಹುಲಿಯಂಥ ಮನುಷ್ಯ. ಅವರು ಹಾಕಿದ ಉಗುಳು ಜನರು ದಾಟುತ್ತಿರಲಿಲ್ಲ. ಹುಬ್ಬು ಹಾರಿಸಿದರೆ ಹುಲಿ ನಿಲ್ಲಬೇಕು, ಇಂಥ ಜಬರ್ ಅವನದು ಅವನಿಗೆ ಈಗ ಮದುವೆಯ ಹುಚ್ಚು ಹಿಡಿದಿತ್ತು

ದೇಸಾಯರ ಹುಚ್ಚು ನೋಡಿದರೆ ನರಸಿಂಗರಾಯ ಒಳ್ಳೇ ವಿವೇಕಿ ಎಂದೇ ಹೇಳಬೇಕು ನರಸಿಂಗರಾಯನಿಗೆ ಹೆಂಡತಿ ಯಿದ್ದಳೆ, ಒಬ್ಬ ಹನ್ನೆರಡು ವರ್ಷದ ಮಗಳಿದ್ದಾಳೆ. "ಏನು ವಿವೇಕಿ ?" ಎನ್ನುವಿರಾ ? ಹುಡುಗಿಯಾಗಿ ಹನ್ನೆರಡು ವರ್ಷ ಕಾಯ್ದರೂ ಮತ್ತೆ ಹೆಂಡತಿಗೆ ಬಯಕೆಯಿಲ್ಲ, ಬಸಿರಿಲ್ಲ. ದಾಯಾದಿಗಳು ದತ್ತಕಪುತ್ರನನ್ನು ಕೊಡಲು ನಾ ಮುಂದೆ ನೀ ಮುಂದೆ ಎಂದು ಹೊಂಚಿನಲ್ಲಿಯೇ ಒದ್ದಾಡುತ್ತಿದ್ದರು. ಈ ವಿಚಾರ ನರಸಿಂಗರಾಯನಿಗೂ ಸೇರಲಿಲ್ಲ; ಅವನ ಹಂಡತಿಗೂ ಸರಿಬರಲಿಲ್ಲ. ಹೆಂಡತಿಯ ಅರ್ಧಮರ್ಧ ವಿಚಾರದಿಂದಲೇ ಅವನು ಈಗ ಹೆಣ್ಣು ನೋಡಲು ಬಂದಿದ್ದ. ಆದರೆ ಮಗಳಿಗೆ ವರ ನೋಡಿ ಬರುವೆನೆಂದು ಆಪ್ತೇಷ್ಟರಿಗೆ ಹೇಳಿದ್ದ. ನರಸಿಂಗರಾಯ ದೇಸಾಯರಿಗಿಂತ ಎಷ್ಟೋ ಚಿಕ್ಕವನಾದರೂ ನರಿಜೋಡಿಯ ವತನದಾರರು ಎಂಬ ಸಲಿಗೆ ಇತ್ತು ದೇಸಾಯರ ಮನೆಯಲ್ಲಿಯೇ ಅವನು ಬಂದು ಇಳಿದು ಕೊಂಡಿದ್ದ. ಕೊಲೆಯಂತೆಯೇ ಮದುವೆಯ ಮಾತುಗಳೂ ಬಹಳ ದಿವಸ ಮುಚ್ಚಿ ಉಳಿಯುವದಿಲ್ಲ. ನರಸಿಂಗರಾಯ ಬರುವ ಹೊತ್ತಿಗೆ ಅವನು ಕನ್ಯಾ ನೋಡಲು ಬಂದ ಮಾತು ಊರಿಗೇ ತಿಳಿದ್ದಿತು. ತಮ್ಮ ವತನದಾರರ ಹುಚ್ಚು ಬೇರೆ ಊರಿಗೂ ಹಬ್ಬಿತೇನೋ ಎಂದು ಅವರಿಗೆ ಸಂಶಯ ಬಂತು. ಬೇರೆ ಪ್ರಸಂಗವಿದ್ದರೆ ಅವರು ನರಸಿಂಗರಾಯನ ಗೊಡವೆಗಾಗಲಿ, ಅವನಿಗೆ ಸಿದ್ಧವಾದ "ಕನ್ಯಾ"ದ ಗೊಡವೆಗಾಗಲಿ, ಹೋಗುತ್ತಿರಲಿಲ್ಲ. ಈ ಪ್ರಸಂಗವೇ ಬೇರೆ. ಊರವರು ಹುಡುಗಿಯ ತಂದೆಗೆ "ಕೊಟ್ಟರೆ ಒಳಿತಾಗಲಿಕ್ಕಿಲ್ಲ." ಎಂದು ಹೆದರಿಕೆ ಹಾಕಿದ್ದಲ್ಲದೆ ನರಸಿಂಗರಾಯನ ಬೀಗನ ಊರಿಗೂ ಈ ಬಗ್ಗೆ

ರಾಯ ಬಂದ ದಿನ ಸಾಯಂಕಾಲವೇ ಕನ್ಯಾ ನೋಡಲಿಕ್ಕೆ ಬರುವದಾಗಿ ಹುಡುಗಿಯ ಮನೆಯವರಿಗೆ ಹೇಳಿಕಳುಹಿದರು. ಕನ್ಯೆ ತಮ್ಮ ಯಾವದೋ ಆಪ್ತರ ಮನೆಯ ಮದುವೆಗೆ ಅಂದೇ ಬೆಳಗ್ಗೆ ಪರವೂರಿಗೆ ಹೋಗಿರುವದಾಗಿ ಹೇಳಹೋದವನು ನಿರೋಪ ತಂದನು. ನರಸಿಂಗರಾಯ ಇದು ಕಾಣುವಷ್ಟು ಸಹಜಘಟನೆಯೇನೂ ಅಲ್ಲವೆಂದು ತರ್ಕಿಸಿದನು; ದೇಸಾಯರ ಮುಖ ನೋಡಿದನು.

ದೇಸಾಯರು “ ನನಗೆ ಹಾಗೆ ಅನಿಸಿತ್ತು ” ಎಂದರು.

“ ಅದೇಕೆ ? ” ನರಸಿಂಗರಾಯ ಕೇಳಿದ.

“ ಅದೆಲ್ಲಾ ಸಂಜೆಗೆ ಹೇಳುತ್ತೇನೆ ” ದೇಸಾಯರೆಂದರು

ಅಂದು ಸಂಜೆಗೆ ಅವರಿಬ್ಬರು ದೇಸಾಯರ ತೋಟದ ಕಡೆಗೆ ತಿರುಗಾಡಲು ಹೊರಟರು. ಹಾದಿಯಲ್ಲಿ ಊರ ಹೊರಗಿನ ಬಾವಿಯ ಹತ್ತಿರ ಒಬ್ಬಳು “ ಏನದೆವ್ವಾ, ಏನೋ ಪುತ್ರ ಶುಭಲಕ್ಷಣ ಕಾಣಸ್ತದs ? ’ ಎಂದಳು. ‘ ಇದಿರು ಹೆಣ್ಣಿನ ಸಂಭ್ರಮ ಇರಬಹುದು ? ’ ಇನ್ನೊಬ್ಬಳು ತುಟಿ ಕಚ್ಚಿ ಉತ್ತರ ಕೊಟ್ಟಳು. ಇಬ್ಬರೂ ನಕ್ಕರು, ಮೆಲ್ಲಗೂ ನಕ್ಕರು ಗಟ್ಟಿಯಾಗಿಯೂ ನಕ್ಕರು. ಮುಂದೆ ಹೋಗುವ ವತನದಾರರಿಗೂ ಕೇಳಿಸುವಂತೆಯೆ ಮಾತನಾಡಿದ್ದರು. ನರಸಿಂಗರಾಯ ಹೊರಳಿ ನೋಡುವಾಗ ಇವರು ಓರೆಮೋರೆಯಾಗಿ ಬಾವಿಯ ಕಡೆಗೆ ತಿರುಗಿದ್ದರು. ನರಸಿಂಗರಾಯನಿಗೂ ದೇಸಾಯರಿಗೂ ಮೊದಲು ಆ ಮಾತು ಈ ಮಾತು ಆಗಿ ಮೂಲಮಾತಿಗೆ ಅವರು ಬಂದರು.

“ ಇದೇನಿದು ನಿಮ್ಮೂರೊಳಗಿನ ಒಳಸಂಚು ? ” ನರಸಿಂಗರಾಯ ತಿವಿದು ಕೇಳಿದ.

“ ಒಳಸಂಚೂs ...... ಒಳಸಂಚೂs ...... ಬರೋಬ್ಬರಿ ಹೆಸರಿಟ್ಟೆರಿ, ಖರೇ ಒಳಸಂಚು ...... ” ದೇಸಾಯರೆಂದರು.

ಆ ಹೆಂಗಸರು ಆಗಳೇ ‘ ಇದಿರು ಹೆಣ್ಣು ... .... ” ಎಂದು ಕಿಲಿ ಕಿಲಿ ನಕ್ಕರಲ್ಲಾ ಅದೇನು ನಗೆಚಾಟಿಗೇ ? ”

‘ ಒಣಾ ನಗಚಾಟಿಗೆ ’ ದೇಸಾಯರು ಮೋರೆ ಕಿವಿಚಿ

ಹೇಳಿದರು.

" ನಿಮ್ಮೂರವರಿಗೆ ವತನದಾರ ಹಿಡತ ಗೊತ್ತದನೋ ಇಲ್ಲೋ ನರಸಿಂಗರಾಯ ಗದ್ದರಿಸಿದ.

ಅದನ್ನs ತೋರಿಸಲಿಕ್ಕೆ „ನಾನೂ ನಡಾ ಕಟ್ಟೇನಿ. "

ನಿವ s ? "

" ಹೌದು, ನಾನ s. "

' ನೀವೇನ ಮಾಡವ್ರು ? '

' ಸದsಳ ಲಗ್ನಾ ಮಾಡ್ಕೋತೀನಿ. ಊರವರ ಮೂಗು ಜಜ್ಜತೇನಿ.'

ದೇಸಾಯರ ಲಗ್ನಾ ಎಂದರೆ ನರಸಿಂಗರಾಯನಿಗೂ ನಸುನಗ ಬಂದಿತ್ತು. ' ಏನು ! ನೀವೇ ಲಗ್ನಾ ಮಾಡ್ಕೋತಿರಿ ? ' ರಾಯ ಕೇಳಿದ.

" ನಾನು ಮಾಡ್ಕೋತಿನಿ, ಇಷ್ಟೇ ಅಲ್ಲ, ನನ್ನ ಜೋಡಿ ನನ್ನ ವಯಸ್ಸಿನವರು ಮತ್ಯಾರಾದರೂ ಬಂದರೆ ಅವರದೂ ಮಾಡ್ತೇನಿ ನರಸಿಂಗ, ನೀನು ನನಗಿಂತ ಹಚ್ಚಾದರೆ ನಾಲ್ಕೆಂಟು ವರ್ಷಕ್ಕೆ ಸಣ್ಣವ. ನಮ್ಮ ನಿಮ್ಮ ಮದುವೆ ಎಂದರೆ ಊರವರಿಗೆ ಯಾಕ ಉಸಾಬರಿ? " ಈ ಮಾತುಗಳನ್ನಾಡುವಾಗ ದೇಸಾಯರಿಗೆ ಹರೆಯದವರ ಹುಮ್ಮಸ ಬಂದಿತ್ತು.

' ಮತ್ತ ನಾವು ನೀವು ನಾಳೆ ನಮ್ಮ ಹೆಂಡಂದಿರ ಹೊಟ್ಟಗೆ ಹಾಕಲಿಕ್ಕೆ ಮಂದೀ ಮನೀಗೆ ಕಳಿಸೂದಿಲ್ಲ ! ' ನರಸಿಂಗರಾಯನಿಗೆ ಈಗಾಗಲೆ ದೇಸಾಯರಲ್ಲಿ ಸಹಾನುಭೂತಿ ಹುಟ್ಟಿತ್ತು. " ನಿಮ್ಮ ಲಗ್ನಕ್ಕೂ ಊರವರು ಅಡ್ಡ ಬಂದಿದ್ದಾರೇನು ? " ರಾಯ ಕೇಳಿದ.

" ನಮಗ ಇತಬೇಕೆಂಬೋ ಅಷ್ಟಗೋ ಲs ನಿಮಗ ಒಡ್ಯಾರ. ಮೊನ್ನೆ ಮೊನ್ನಿನ ಲಗ್ನ ಊರವರೆಲ್ಲಾ ತಾವೇ ಕೂಡಿ ಮಾಡಿ ಈಗ ಹೆಂಡತಿ ಸತ್ತು ಇಷ್ಟು ತಿಂಗಳಾದರೂ ಮನೀಗೆ ಬಂದವರೊಬ್ಬರೂ ಆ ಮಾತು ತೆಗೆಯುವದಿಲ್ಲ. ನರಸಿಂಗರಾಯ, ಏನು ಮಾಡಲಿ? ನಾ ನಿನಗ ನನ್ನ ಮಗಳ್ನ ಕೊಡುತ್ತಿದ್ದೆ ಈಗಾದರೂ ಏನಾತು ?

ಮಾಡ್ಕೋತಿ ಏನು ಹೇಳು ? ”

“ನಿಮಗೆ ಮಗಳಿದ್ದಾಳ ? ಎಲ್ಲಿದ್ದಾಳೋ ” ಕೇಳಿದ ರಾಯ.

“ ಇದ್ದಾಳ ತೊಟ್ಟಿಲದಾಗ ಇದ್ದಾಳ. ಕನ್ಯಾ ಅಂದರೆ ಕನ್ಯಾ ನನ್ನ ಹುಡುಗೀ ಅಂತ ಹೇಳೂದಿಲ್ಲ. ನಾಳೆ ದೊಡ್ಡಾಕಿ ಆಗಿ ಹಾದಿಯಲ್ಲಿ ಹೊರಟರೆ ರಾಜರು ಮಹಾರಾಜರು ನೋಡಿ ಕುದುರೀ ಇಳಿದು ಕೈ ಹಿಡಿದಿರಬೇಕು. ಈಗs ಹುಚ್ಚಮುಂಡೆ ಹಿಂಗ ನಗ ತಾಳ, ಹಿಂಗ ಆಡತಾಳ, — ಎದೀಗೆ ಅವಚಿಕೊಂಡ ಕೂಸು ಕೆಳ ಗಿಡಬೇಕು ಅನಿಸುವದಿಲ್ಲ. ಇಕೀ ತಾಯೀನೂ ಹಿಂಗs· ಇದೇ ಹೋಲಿಕಿ, ಇವೇ ಚಂದ ! ”

ನರಸಿಂಗರಾಯನಿಗೆ ದೇಸಾಯರಲ್ಲದೆ ಲಗ್ನಕ್ಕೆ ಮತ್ತಾರು ಯೋಗ್ಯ ಅನಿಸಿತು· “ ದೇಸಾಯರs, ಬಿಡಬೇಡಿರಿ. ಆಗಿಹೋಗಲಿ ಲಗ್ನ ” ವೆಂದರು.

“ ನಾನು ಊರವರಿಗೆ ನೊವ್ಪ ಹಾಕುತ್ತೇನೇನು ? ಎಂದು ವತನದಾರೀ ನಗೆ ನಕ್ಕರು. ನರಸಿಂಗರಾಯನೂ ನಕ್ಕ.

ಇಬ್ಬರೂ ತಮ್ಮ ತಮ್ಮ ಹಳೆಯ ಕಥೆ ಒಬ್ಬರಿಗೊಬ್ಬರು ಹೇಳಿ ಕೊಂಡರು ದೇಸಾಯರ ಕಥೆ ಸ್ವಲ್ಪ ಉದ್ದಾಯಿತು. ರಾಯರದು ಗಿಡ್ಡಾಯಿತು. ಇಬ್ಬರ ಸಹಾನಭೂತಿಯೂ ಸರಿಯಾಯಿತು. ಮನೆಗೆ ತಿರುಗಿ ಬಂದಾಗ್ಗೆ ರಾತ್ರಿಯಾಗಿತ್ತು. “ ಯಾವದೋ ತಂದೀ ಮಗನ್ನ ತಂದು ನಮಗೆ ನೀರು ಬಿಡಲಿಕ್ಕೆ ಕೂಡಸೋದು, ನಮಗೇನು ಸರಿ ಕಾಣೂದಿಲ್ಲಾ ” ಎಂದು ಇಬ್ಬರೂ ಎಂದರು.

ಮಾರನೆಯ ದಿವಸ ಬೆಳಗ್ಗೆ ನರಸಿಂಗರಾಯ ಊರಿಗೆ ಹೊರಟ ದೇಸಾಯರು ಕಳುಹಲು ಹೊರಟರು “ ನಾನು ಎಲ್ಲಾ ಮಾಡಿ ಇಡುತ್ತೇನೆ. ” ಇವರು ಹೇಳಿದರು. ‘ ನಾನು ಬಿಟ್ಟೆಪ್ಪನಲ್ಲ. ಇಬ್ಬ ರದೂ ಆಗಿಹೋಗಲಿ ” ರಾಯ ಹೇಳಿದ. ಹಾದಿಯಲ್ಲಿ ಮುನ್ನಾ ದಿನ ದೇಸಾಯರ ಮನೆಯಲ್ಲಿಯೇ ಭೆಟ್ಟಿಯಾಗಿದ್ದ ಒಬ್ಬ ದೊಡ್ಡ ರೈತನನ್ನು ಕಂಡು ರಾಯರು ತಾನಾಗಿಯೇ “ ದೇಸಾಯರು ಲಗ್ನಾ ಹೊಡಸಿಬಿಡಬೇಕೆನ್ನುವರಲ್ಲಾ ? ” ಎಂದರು. “ ಹ್ಯಾಂಗಾಂಗ

ಆಗ್ತದೋ ನೋಡೋಣ ! ” ಎಂದು ಯಾವದೋ ದನಿಯಲ್ಲಿ ಅಂದು “ ದೇವರ ಮನಸ್ಸು ಯಾರಿಗೆ ತಿಳೀಬೇಕ್ರಿ ? ” ಎಂದು ಟೀಕೆ ಜೋಡಿಸಿದ.

ಸ್ವಲ್ಪ ಮುಂದೆ ಹೋದ ಮೇಲೆ ದೇಸಾಯರು ಕೇಳಿದ್ದರು. “ ಯಾಕೆ, ಸೊಕ್ಕು ನೋಡಿದಿರೋ ಇಲ್ಲೋ ? ”

‘ ನಾ ಇದ್ದೇನಿ, ಹೆದರಬೇಡ್ರಿ ” ರಾಯ ಹೇಳಿದ.

ಮುಂದೆ ಇನ್ನೊಂದೆರಡು ಊರಗಳಲ್ಲಿ ಹೆಣ್ಣು ನೋಡಿಕೊಂಡು ನರಸಿಂಗರಾಯ ತನ್ನೂರಿಗೆ ತಿರುಗಿ ಹೋದ.

೩

ಮನೆಗೆ ಬರುವದೊಳಗಾಗಿ ಹೆಂಡತಿ ಮಗಳನ್ನು ಕರೆದುಕೊಂಡು ತವರು ಮನೆಗೆ ಹೋಗಿದ್ದಳು ಔಷದ ಕೊಡಿಸುವದಕ್ಕಾಗಿ ಬೀಗ ತಾನೇ ಮನೆತನಕ ಬಂದು ತಮ್ಮಕ್ಕನನ್ನು ಕರೆದುಕೊಂಡು ಹೋದ ನೆಂದು ಮನೆಯೊಳಗಿನ ಮುದುಕಬಜಿಯು ಹೇಳಿದಳು. “ಯಾರೋ ವೈದ್ಯರು ಬಂದಿರಬೇಕು, ಊರಿಗೆ ಎಂದೂ ಕರೆಯದ ತಮ್ಮ ಕರೆದೊಯ್ದಿದ್ದಾನೆ, ಹೆಂಗಸರಿಗೂ ಒಂದು ಹುಚ್ಚು – ”ಎಂದು ಮನ ದೊಳಗಂದುಕೊಂಡು ನರಸಿಂಗರಾಯ ಸಮಾಧಾನ ಹಚ್ಚಿಕೊಂಡ. “ ಔಷದ ನಡೆದಿದೆ. ಐದಾರು ಸಪ್ತಕಗಳಾದರೂ ಕೊಡಿಸಬೇಕಾ ದೀತು. ಬಹಳ ದಿನಕ್ಕೆ ತವರು - ಮನೆಗೆ ಬಂದಿದ್ದಾಳೆ. ಔಷದ ಕೊಡಿಸುವದಾದಮೇಲೆ ಬರುತ್ತಾಳೆ ಅಪ್ಪಣೆಯಿರಬೇಕು” ಎಂದು ಬೀಗನ ಕಾಗದ ಬಂತು ಅಷ್ಟರಲ್ಲಿ. ಅದಕ್ಕೆ ಏನೂ ಉತ್ತರ ಬರೆಯದೆ ಒಂದು ತಿಂಗಳ ಹಾದಿ ಕಾಯ್ದು “ ಬೇಗನೆ ಕಳಿಸಬೇಕು” ಎಂದು ರಾಯ ಬೀಗನಿಗೆ ಕಾಗದ ಬರೆದ. “ ಇನ್ನೂ ಔಷದ ಕೊಡಿಸುವದು ಮುಗಿದಿಲ್ಲ ಅದರಲ್ಲಿ ಬೇರೆ ಅಕ್ಕನಿಗೆ ಎರಡು ತಿಂಗಳು ಹೋದಂತೆ ತೋರುತ್ತದೆ. ಅದಲ್ಲದೆ ಚಿ|| ಕುಸುಮಾವತಿಗೆ (ರಾಯರ ಮಗಳಿಗೆ) ಅಕ್ಕನ ಹೇಳಿಕೆಯಂತೆ ವರ ನೋಡುತ್ತಿ

ದ್ದೇನೆ. ಏನಾದರೂ ಮಾತಿಗೆ ಬಂದರೆ ಕೂಡಲೇ ತಮಗೆ ತಿಳಿಸುತ್ತೇನೆ. ಎಲ್ಲರೂ ಕ್ಷೇಮವಾಗಿದ್ದಾರೆ" ಎಂಬ ಉತ್ತರದ ಕಾಗದ ಬಂತೇ ಹೊರ್ತು ಹೆಂಡತಿ ಮಕ್ಕಳು ಬರಲಿಲ್ಲ. ಈ ಕಾಗದ ಬಂದಮೇಲೆ ರಾಯನಿಗೆ ಅನೇಕ ಯೋಚನೆಗಳು ಹೊಳೆಯತೊಡಗಿದವು. ಇದೇನೋ ಆಟವಿದ್ದಂತಿದೆ — ಎಂದು ಅವನಿಗನಿಸಿತು. ನಾಲ್ಕಾರು ದಿವಸಗಳಲ್ಲಿ ಅವನು ತಿಳಿಸದೆ ಹೆಂಡತಿಯ ತವರು ಮನೆಗೆ ಹೋದ. ಹೆಂಡತಿ ಹೊರಗೆ ಕೂತಿದ್ದಳು. "ಇರಲಿ ಎಂದು ಕೊಂಡ. ನಾಲ್ಕು ದಿವಸ ಅಲ್ಲಿದ್ದುಕೊಂಡು ಹೆಂಡತಿಯು ಮಕ್ಕಳೊಡನೆ ತನ್ನೂರಿಗೆ ಬಂದ. ಬೀಗನೊಡನೆ ಹೆಚ್ಚು ಮಾತಾಗಲಿಲ್ಲ. ತಾನೂ ಮಗಳಿಗೆ ವರ ನೋಡಲಿಕ್ಕೇ ಊರಿಗೆ ಹೋಗಿದ್ದು ಎಂದು ರಾಯ ಹೇಳಿದ. "ಗೊತ್ತಾಗಿಲ್ಲವಷ್ಟೇ?" ಬೀಗ ಕೇಳಿದ. "ತಮಗೆ ತಿಳಿಸದೆ ಆದೀತೇ? ರಾಯ ಸ್ವಲ್ಪ ಒಗರಿನಿಂದಲೇ ಎಂದ.

ಊರಿಗೆ ಬರುವದರೊಳಗಾಗಿ ದೇಸಾಯರ ಕಾಗದ ಬಂದಿತ್ತು. 'ನನ್ನ ಲಗ್ನ ಮಾಡುವದು ತಮ್ಮನ್ನೇ ಕೂಡಿದೆ. ನಾನು ನಿಮ್ಮನ್ನೇ ನಂಬಿದ್ದೇನೆ. ... ನಮ್ಮೂರವರ ಬಿಂಕ ಹೆಚ್ಚಾಗಿದೆ. ನಿಮ್ಮ ಲಗ್ನದ ಮಾತು ನಿಮ್ಮ ಬೀಗರಿಗೂ ತಿಳಿಸಿದ್ದರಂತೆ ........ ನಮ್ಮ ಊರವರು ಸ್ವಲ್ಪ ನೀರಿನಲ್ಲಿ ಮುಳುಗುವವರಲ್ಲ. .. ಎಂದು ಮುಂತಾಗಿ ಕಾಗದದಲ್ಲಿತ್ತು. ಮನೆಗೆ ಬಂದಮೇಲೆ ರಾಯರು ಹೆಂಡತಿಗೆ ಒಂದ ದಿವಸ ಕೇಳಿದರು.

"ನಾನು ಊರಿಗೆ ಹೋಗಿ ಬಂದ ಸುದ್ದಿಯನ್ನೇಕೆ ಕೇಳಲಿಲ್ಲ?"

"ಸುದ್ದಿಯೇನಾದರೂ ಇದ್ದರೆ ನೀವೆ ಹೇಳುತ್ತಿದ್ದಿರಿ ಅಲ್ಲದೆ ಆ ಸುದ್ದಿಯ ಸುಖ ನನಗೇನು?"

"ಯಾಕೆ ನಿನಗೆ ಕೇಳೇ ನಾನು ಹೋಗಿರಲಿಲ್ಲs"

"ಗಂಡಸೇ ಕೂತು ದಿನಾ ಆ ಮಾತು ತಲೀಗೆ ಕಟಿವರೆ ಹೆಣ್ಣು ಹೆಂಗಸು ನಾನು ಏನು ಹೇಳಬೇಕು?"

"ನನಗೆ ಗಂಡುಮಕ್ಕಳು ಬ್ಯಾಡs?"

"ನಿಮಗೆ ಬೇಕು, ನನಗೆ ಬೇಕು. ಯಾರಿಗೆ ಬ್ಯಾಡಾ?"

" ಎಷ್ಟು ದಿವಸ ಹಾದೀ ನೋಡೋದು ? ಏನು ಮಕ್ಕಳು ಇನ್ನ ಮಳೆಯೊಳಗಿಂದ ಬಿದ್ದರೆ ನೈ. "

" ಮಳೀನೂ ಹೇಳಿ ಬರೂದಿಲ್ಲ, ಮಕ್ಕಳೂ ಹೇಳಿ ಬರೂದಿಲ್ಲ. ನನಗಾರೆ ಏನು ವಯಸ್ಸು ಮೀರಿ ಹೊಗೇದೀಗ ? " ರಾಯರ ಹೆಂಡತಿಯು ಮೋರೆ ಕೆಳಗೆ ಹಾಕಿ ಅಂದಳು.

" ತಮ್ಮ ಕೊಟ್ಟು ಕಳಿಸಿದ ಔಷಧ ಇದನ್ಸ ಏನು ? " ರಾಯ ಅಣಕಿಸಿ ಕೇಳಿದ.

" ಯಾಕ ? ದಿನಾ ತಗೊಂಬೋದು ನೀವೇ ನೋಡಿಲ್ಲೇನು? ಅದಿರಲಿ, ನೀವು ಹೋದ ಕೆಲಸ ಏನಾತು ನೀವs ಹೇಳಿರಲ್ಲಾ ?"

" ನಾನು ನನಗಾಗಿ ಹೋಗಿರಲಿಲ್ಲ ಕುಸುಮಿಗೆ ವರಾ ನೋಡಲಿಕ್ಕೆ ಹೋಗಿದ್ದೆ. "

" ವರಾನs " ಯಾವ ಮುದುಕನ್ನ ನೋಡಿ ಬಂದೀರಿ? "ಚಟ್ಟನೆ ರಾಯರ ಹೆಂಡತಿಯು ಮಾತು ಬಂದವು.

ನರಸಿಂಗರಾಯನಿಗೆ ಎದೆಗೆ ಹೊಡೆದಂತಾಯಿತು. ನಾಟಕ ಬಹಳೇ ಮುಂದುವರಿದಿದೆ. ಎಂದು ತೋರಿತು.

" ಯಾರು ಹೇಳಿದರು, ನಾನು ವರಾ ನೋಡಿ ಬಂದೆ ಅಂತ?"

" ನೀವೇ ಇದೀಗ ಹೇಳಿದಿರಲ್ಲಾ "

" ಅಲ್ಲಾ ಮುದುಕನ್ನ ನೋಡಿ ಬಂದೆ ಅಂತ ಯಾರು ಹೇಳಿದರು. ? "

ನಮ್ಮ ತಮ್ಮನ ಕಚೇರಿಗೆ ಯಾರೋ ಯಾವದೋ ಹಳ್ಳಿಯವರು ಬಂದಿದ್ದರಂತs ಅವರು ಮಾತಾಡುತ್ತಿದ್ದರಂತs"

" ಹೇಳಿದವ ಹುಚ್ಚ ಇರಬೇಕು. "

" ಇರಲಿ, ಹಾಂಗs ಆಗಲಿ" ಹೀಗೆ ಹೆಂಡತಿಯಿಂದ ಮಾತು ರಾಯರಿಗೆ ಏಕೋ ಚುಚ್ಚಿದವು.

" ನಾನು ದೊಡ್ಡ ದೇಸಾಯರನ ನೋಡಿ ಬಂದೆ " ರಾಯರು ದೊಡ್ಡ ಡವಲಿನಿಂದ ಹೇಳಿದರು.

" ಅಯ್ಯs ದೇಸಾಯರಂಬವರು. ಮುದುಕರಿರೂದಿಲ್ಲೇನು ?

ದೊಡ್ಡವರಾತು, ಸಣ್ಣವರಾತು !"



ಮುಂದೊಂದು ದಿನ ದೇಸಾಯರಿಂದ. ಇನ್ನೊಂದು ಕಾಗದಬಂತು. ಸಂಜೆಯಾಗಿತ್ತು ಆಗ. ರಾಯರು ಮಗಳನ್ನ ಕರೆದರು.

"ಕುಸುಮಾ, ನನ್ನ ಕೂಡಾ ಬರತೀಯಾ ?"

'ಯಾತಕ್ಕs ?'

'ಬರುತೀಯೇನು ಹೇಳು ?'

'ಎಲ್ಲಿಗೆ ?'

'ಕುಸುಮಾ, ನಾನು ಹೇಳಿದ್ದು ಮಾಡುತೀಯಾ ?'

"ಏನು ?"

"ನಿನಗೆ ಮದುವೀ ಮಾಡಿಕೊಡತೇನಿ"

"ನನಗೆ ಮದುವೀನೆ ಬ್ಯಾಡ" ಎಂದವಳೇ ಕುಸುಮಾ ಒಳಗೆ ಓಡಿಹೋದಳು.

"ಕುಸುಮಾ ಬಾ, ಬಾ ಇಲ್ಲಿ"

ಕುಸುಮಾ ಮತ್ತೆ ಬಂದಳು.

"ಬಹಳೆಷ್ಟು ವನ್ತಾ - ಒಡವಿ ಇಡಶಾರ ದೊಡ್ಡ ಮನಿ; ದೊಡ್ಡ ಮನೆತನ; ದೊಡ್ಡ ದೇಸಾಯರು !" ರಾಯರಾದರು.

"ದೊಡ್ಡ ಗಡ್ಡಾ ಬಿಟ್ಟು, ದೊಡ್ಡ ರುಮಾಲು ಸುತ್ತಿ, ದೊಡ್ಡ ದೊಡ್ಡ ಕೋಲು ಹಿಡಕೊಂಡು ನಡಿತಾರಂತs ! ಅಲ್ಲs .?
ಕುಸುಮಾ ಬಾಗಿಲ ಮರೆಗೆ ನಿಂತು ಕೇಳಿದಳು.

ರಾಯರು ಗಾಬರಿಯಾದರು. "ಎಷ್ಟು ಕಾದಂಬರಿ ರಚನೆಯಾಗಿದೆ ಯಲ್ಲ!" ಎಂದು ಕೊಂಡರು. "ಎಷ್ಟು ಸುಳ್ಳು ! ಜನರಿಗೇಕೆ ಈ ಉಸಾಬರಿ .... ? ಕುಸುಮಾ, ಇವನ್ನನಗ್ಯಾರು ಹೇಳಿದರು ?"

'ಮಾವಾ— ಅವ್ವಾ ಏನೇನೋ ಮಾತಾಡುತಿದ್ದರಲ್ಲ !"
ಕುಸುಮಾ ಎಂದಳು

ನರಸಿಂಗರಾಯರಿಗೆ ಮಾವನ ಮೇಲೆ ಸಿಟ್ಟು ಬಂತು. ಇಷ್ಟು ದಿವಸಕ್ಕೆ ಹೆಂಡತಿಗೆ ಮತ್ತೆ ಒಂದು ತಿಂಗಾಳಾದ ಸಂಶಯ ಬಂದಿತ್ತು. ಹೆಂಡತಿಯ ಮೇಲೂ ಅವರು ಸಿಟ್ಟಾದರು. ತಾನು ನ್ಯಾ ನೋಡಿ

ಬಂದ ಊರಿನಿಂದಲೂ ಏನೂ ಪತ್ರೋತ್ತರ ಬಂದಿರಲಿಲ್ಲ. ಅವರ ಬಗ್ಗೆಯೂ ಸಿಟ್ಟುಬಂತು. ದೇಸಾಯರ ಊಂನವರು ಇಲ್ಲದ ಕಾರ ಭಾರ ಮಾಡಿವರೆಂದೂ, ಅವರದೇ ಇದೆಲ್ಲಾ ಕಂತ್ರಾಟವಿರಬೇಕೆಂದೂ ಅವರನ್ನು ನೆನಸಿ ಕುದಿದರು. ಕುಸುಮಾ ಇನ್ನೂ ಕೋಣೆಯ ಬಾಗಿ ಲಲ್ಲಿಯೇ ನಿಂತಿದ್ದಳು. ಉತ್ತರ ಕೊಡದೆ ಹುಬ್ಬು ಗಂಟು ಹಾಕಿದ್ದ ತನ್ನ ತಂದೆಯ ಮುಖ ನೋಡಿ ಏನೋ ವಿಚಿತ್ರ ಎನಿಸಿತು ಹುಡುಗಿಗೆ.

" ಕುಸುಮಾ , ಇಲ್ಲಿ ಹತ್ತಿರ ಬಾ " ರಾಯರು ಕರೆದರು ಕುಸುಮಾ ಸಂಶಯ ಹೆದರಿಕೆಗಳಿಂದ ಕೂಡಿ ಮೆಲ್ಲಗೆ ತಂದೆಯ ಹತ್ತಿರ ಬಂದಳು ರಾಯರು ಚಟ್ಟನೆ ಎದ್ದು ಕೋಣೆಯ ಬಾಗಿಲು ಹಾಕಿ ದರು. ಕುಸುಮಾ ನಡುಗಿದಳು. ರಾಯರು ಕೋಣೆಯಲ್ಲಿ ತೂಗು ತ್ತಿರುವ ಒಂದು ಕತ್ತಿಯ ಒರೆಯನ್ನು ಹಿರಿದು ತೆಗೆದರು.

" ನೋಡಿದಿಯಾ, ಕುಸುಮಾ ಆ ಕತ್ತಿಯ ಹೊಳಪು ? "

ಕುಸುಮಾ ಕಣ್ಣು ಮುಚ್ಚಿಕೊಂಡಳು.

" ಅದು ಎಷ್ಟು ಹರತವಿದೆ ಗೊತ್ತಿಲ್ಲವೆ ? "

ದಸರೆಯಲ್ಲಿ ಅದರಿಂದ ಸಹಜವಾಗಿ ಸವರಿ ಲಿಂಬೀಹಣ್ಣು ಹೋಳು ಮಾಡಿದ್ದನ್ನು ಅವಳು ನೋಡಿದ್ದಳು. ಅವಳ ಕಣ್ಣಲ್ಲಿ ನೀರು ಬಂತು.

' ಮಾವಾ – ಗಿವಾ ಎಂದು ಯಾರಾದರು ಮಾತು ಕೇಳಿ ಇಲ್ಲದ ಜಂಭ ಬಡಿದರೆ ಅಲ್ಲಿದೆ ನೋಡು ಹಿರಿದ ಕತ್ತಿ ! ಕೊಟ್ಟ ಮನೀಗೆ ಹೋಗಲಿಕ್ಕೇ ಬೇಕು. '

ಪಾಪ, ಆ ಕೂಸಿಗೆ ಈ ಮಾತಿನ ಅರ್ಥವೆಷ್ಟು ಆಯಿತೋ? ಅವಳ ಹಣೆ ಬೆವತಿತು, ಕೊರಳು ಬೆವತಿತು, ತುಟಿ ಅದರುತ್ತಿದ್ದವು, ಅವಳಿಗೆ ಅಳು ಬರಲೊಲ್ಲದು. ಹಾಗೆಯೇ ತಂದೆಗೋ ಹಿರಿದ ಕತ್ತಿಗೋ ಕೈ ಮುಗಿದಳು ರಾಯರು ಕೋಣೆಯ ಬಾಗಿಲ ತೆರದರು. ಸುಡುಗಾಡಿಗೆ ಹೊರಟ ಹೆಣದಂತೆ ನಿಸ್ತೇಜಳಾಗಿ ಕುಸುಮಾ ಸತ್ತ ಕಾಲಿನಿಂದ ಮೂಡದ ಹೆಜ್ಜೆ ಹಾಕಿ ಹೇಗೋ ಹೊರಬಿದ್ದಳು.

೪

ಅಂದು ರಾತ್ರಿ ಕುಸುಮಾ ಉಣ್ಣಲಿಲ್ಲ. ಅವಳ ತಾಯಿಗೆ ಅಧ್ಯಾವ ಸುದ್ದಿಯೇ ತಿಳಿಯಲಿಲ್ಲ. ರಾಯರೂ ಹೇಗೋ ಊಟ ಮುಗಿಸಿದರು. ಮಧ್ಯರಾತ್ರಿಗೆ ಕುಸುಮಾ ಚೀರಿ ಎಚ್ಚರಾದಳು. ತಾಯಿ ಕೈ ಹಿಡಿದು ನೋಡುತ್ತಾಳೆ, ಮೈ ಸುಡುತ್ತಿತ್ತು. ಮಗಳ ಮೈ ಮೇಲೆ ಕೈಯಿಟ್ಟು ತಾಯಿ ರಾತ್ರಿ ಕಳೆದಳು. ಬೆಳಿಗ್ಗೆ ರಾಯರಿಗೆ ಸುದ್ದಿ ತಿಳಿಸಿದಾಗ ಅವರು ‘ ನನಗೆ ಹುಚ್ಚು ಮಾಡ ಬೇಕೆಂದು ಎಲ್ಲರೂ ಕಟ್ಟು ಮಾಡಿದ್ದರೇನು ? ’ ಎಂದು ಒದರಿದರು. ಅವರ ಹೆಂಡತಿಗೆ ಅದರ ಅರ್ಥವಾಗಲಿಲ್ಲ. “ ದೇಸಾಯರಿಗೆ ಕಾಗದ ಬರೆದು ಇದೀಗ ಬರುತ್ತೇನೆ. ” ಎಂದು ಗರ್ಜಿಸಿ ಹೆಂಡ ತಿಯನ್ನು ಕಳಿಸಿದರು. ಕಾಗದ ಬರೆದದ್ದೂ ಆಯಿತು. ಮಗಳ ಹತ್ತಿರ ಬಂದರು. ಮಗಳ ಮೈಗೆ ಕೈಹಚ್ಚಿ ನೋಡಿದರು. ಕೈ ಸುಟ್ಟಂತಾಯಿತು. ಮಗಳೂ ಚೀರಿದಳು . ‘ ಕತ್ತೀಲೆ ಕುತ್ತಿಗೀ ಕೊಯ್ಯಬ್ಯಾಡ್ರಿ . ” ರಾಯರು ಸಿಟ್ಟಿಗೆದ್ದರು. “ ತವರು ಮನಿಗೆ ಒಯ್ದು ಹುಡಿಗಿಗೆ ಏನೇನೋ ಬೆದರಿಕೆ ಹಾಕಿದ್ದೀರಿ. ಮುದುಕಂತs ಗಿದಕಂತs! ದೇಸಾಯರಿಗೇ ನಾನು ಕೊಡತಕ್ಕಾವಾ . . ” ಎಂದು ವಟಗುಟ್ಟಿದರು. “ ಬದುಕಿ ಎದ್ದರs ನೀವಂದವರಿಗೇ ಕೊಡತೀನಿ, ಅಂತ ಕುಲದೇವರಿಗೆ ಬೇಡಿಕೊಂಡು ಅಂಗಾರ ಹಚ್ಚೇನಿ . . ” ಸುಳ್ಳs ಸಿಟ್ಟಿಗೇಳಬ್ಯಾಡ್ರಿ .... ಹುಡಿಗೀ ಜ್ವರಾ ನೋಡ್ರಿ . . ವೈದ್ಯರ ನಾರೆ ಕರಕೊಂಡು ಬರ್‍ರಿ .... “ ಹೆಂಡತಿ ದೈನಾಸಬಟ್ಟು ಹೇಳಿ ಕೊಂಡಳು. ಮತ್ತೊಮ್ಮೆ ಕುಸುಮಾ ಚೀರಿದಳು , “ಕತ್ತಿಗೆ ಬಲಿ ಕೊಡಬ್ಯಾಡ್ರಿ ! .... ” ರಾಯರು ಬೆದರಿದರು. ವೈದ್ಯರನ್ನು ಕರೆತಂದರು.

ಅತ್ತ ದೇಸಾಯರು ರಾಯರ ಕಾಗದ ಜನರಿಗೆ ತೋರಿಸಿ ಜಂಭ ದಿಂದ ಊರಲ್ಲಿ ಮೆರೆದಾಡಿದರು. ಮುಂದೆ ಎರಡು ದಿನಗಳಲ್ಲಿ

ರಾಯರಿಗೆ ದೇಸಾಯರ ಊರಿಂದ ಒಂದು ಸಹಿ ಇಲ್ಲ ಕಾಗದದ ಬಂತು. "ದೇಸಾಯರೆಂದರೆ ಹಿರಿದ ಕತ್ತಿ ಇದ್ದಂತೆ, ಅದಕ್ಕೇಕೆ ಮಗಳನ್ನು ಬಲಿ ಕೊಡುವಿರಿ? ಮಗಳು ಹೆಚ್ಚಾಗಿದ್ದರೆ ನಿಮ್ಮೂರ ಕೆರೆಯಲ್ಲಿ ನುಗಿಸಿರಿ. ನಮ್ಮೂರಿಗೆ ಅಪವಾದ ಕೊಡಬೇಡಿರಿ." ಇದನ್ನು ಓದುತ್ತಿರುವಾಗಲೆ ರಾಯರ ಹೆಂಡತಿ ಬಂದು "ದೇಸಾಯರಿಗೇ ಹುಡುಗೀನ್ನ ಕೊಡೋಣಂತ. ಆಕಿ ಪುಣ್ಯಾ ಇದ್ದರ ಆಕೀ ಹೊಟ್ಟೀಲೇನs ನಾವು ಗಂಡಸು ಮಕ್ಕಳು ಯಾಕಕಾಣಬಾರ್ದು?" ಎಂದಳು.

"ದೇಸಾಯರ ಮಾತು ಬಿಟ್ಟು ಬಿಡು." ರಾಯರಂದರು.

"ಹುಡುಗೀ ಕತ್ತಿ ಕತ್ತೀ ಅಂತ ಚೀರಿಕೋತಾಳ, – – ನಿಮ್ಮ ಕೋಣ್ಯಾಗಿನ ಕತ್ತೀ ಮರೀ ಯಾರೋ ಉಚ್ಚ್ಯಾರ ಕಾಣಸ್ತದ, — ಅವನ್ನ ಮೊನ್ನೆ ಎಂದಾರ ನೋಡಿ ಹೆದರಿಕೊಂಡಾಳೇನೋ! ಅದನ್ನಷ್ಟು ಮುಚ್ಚಿ ಬಿಡಬಾರದs!"

ರಾಯರು ಮರೆತ ಕೆಲಸ ಅರಿತು ಮಾಡುವವರಂತೆ ನಾಲಿಗೆ ಕಚ್ಚಿ ಕೋಣೆಗೆ ಹೋಗಿ ಕತ್ತಿಯನ್ನು ಒರೆಗಾಣಿಸಿ ಬಂದರು.

ಜ್ವರ ಬಂದು ಇಂದಿಗೆ ಇಪ್ಪತ್ತು ದಿವಸಗಳಾಗಿದ್ದವು. ರಾಯರ ಮುಖ ಹುಚ್ಚಿಟ್ಟು ಹೋಗಿತ್ತು. ಈ ಒಳಗಾಗಿಯೇ "ನನ್ನ ಮಗಳು ನಿಮ್ಮ ಹೆಸರು ಕೇಳಿ ಪ್ರಾಣ ಬಿಟ್ಟಳು. ನೀವಿನ್ನು ಬೇರೆ ಹೆಣ್ಣು ನೋಡಿಕೊಳ್ಳಬೇಕು" ಎಂದು ಅವರು ದೇಸಾಯರಿಗೆ ಕಾಗದ ಬರೆದಿದ್ದರು ರಾಯರಿಂದ ದೇಸಾಯರಿಗೆ ಬಂದ ಪತ್ರ ಎಂದು ಊರ ಪ್ರತಿಷ್ಠಿತರು ಓದಿ ನೋಡಿದರು, "ದೇಸಾಯರೆಂದರೆ ಹಿರಿದ ಕತ್ತಿ" ಎಂದು ಜಾಹೀರು ಮಾಡಿದರು. ದೇಸಾಯರಿಂದ ರಾಯರಿಗೆ ಸಮಾಧಾನ ಹೇಳುವ ಪತ್ರ ಬಂತು. ಹೆಂಡತಿ ಕೇಳಿದಳು.

"ಯಾರ ಪತ್ರ? ದೇಸಾಯರದೇನು?"

"ದೇಸಾಯರ ಮಾತು ತಗೆಯಬೇಡ" ರಾಯರಂದರು.

"ನಾನು ಬೇಡಿಕೊಂಡೇನಿ, ಅವರಿಗೇ —"

"ನಾನೂ ಹೇಳಿಕೊಂಡೇನಿ ದೇವರಿಗೆ, ಅವರಿಗೆ ಕೊಡೂ

ದಿಲ್ಲಾ" ಎಂದು ರಾಯರು ಸಣ್ಣ ಮೋರೆ ಮಾಡಿ ಹೇಳಿದರು.

‡ ‡ ‡ ‡ ‡

ಕುಸುಮಾ ವಿಷಮಜ್ವರದೊಳಗಿಂದ ಎದ್ದ ಮೇಲೂ ಕೆಲ ದಿವಸ ಆ ಕೋಣೆಯ ಕಡೆಗೆ ಹೋಗುತ್ತಿದ್ದಿಲ್ಲ ದೇಸಾಯರ ಲಗ್ನ ಮಾತಿನಲ್ಲಿಯೇ ಮುಗಿಯಿತು. ಹರಿದ ಕತ್ತಿ ಒರೆಗೊಂಡಿತು.



# ಹರಟೆಗಳ ಮುಂಚೆ ಒಂದು ಹಳೆಯ ಹರಟೆ

ಹರಟೆಗಳಿಗೂ ಒಂದು ಮುನ್ನುಡಿಬೇಕು ! ಮುನ್ನುಡಿ ಇಲ್ಲದ ಪುಸ್ತಕವು ಕುಂಕುಮದ ಬೊಟ್ಟಿಲ್ಲದ ಹೆಣ್ಣು ಮೊಗದಂತೆ - ಹೀಗೆ ಎಲ್ಲರ ತಿಳುವಳಿಕೆ. ಆದರೆ ಹರಟೆಗೆ ಹಾಗೆ ತಿಳುಕೊಳ್ಳುವ ಕಾರಣ ವಿಲ್ಲ. ಹರಟೆ ಪಶ್ಚಿಮದಿಂದ ಬಂದುದು. ಅಲ್ಲಿಯ ಹೆಣ್ಣುಮಕ್ಕಳಂತೆಯೇ ಈ ಹರಟೆಗಾದರೂ ಮುನ್ನುಡಿಯ ಕುಂಕುಮದ ಸೌಭಾಗ್ಯದ ವಿಧಿನಿಷೇಧವೇಕೆ ? ನಮ್ಮ ದೇಶಕ್ಕೆ ಬಂದ ಮೇಲೆ ನಮ್ಮ ಸಂಸ್ಕಾರ ಬೇಕು. ಸರಿ, ಪುಸ್ತಕಕ್ಕೆ ಮುನ್ನುಡಿಯನ್ನು ಬರೆಯುವದು ಪೂರ್ವಸಂಪ್ರದಾಯವಿಲ್ಲ ತಾನೆ ? ಹಾಗಲ್ಲ ಪೂರ್ವದ ಪೀಠಿಕಾ ಸಂಧಿಯೇ ಈಗಿನ ಮುನ್ನುಡಿ ತುದಿಮೊದಲಿಲ್ಲದ ಈ ಹರಟೆಗೆ ಮುನ್ನುಡಿ ಏಕೆ ? ಅದಕ್ಕೆ, ತುದಿಮೊದಲಿಲ್ಲೆಂತಲೆ ಅದರ ತುದಿಮೊದಲನ್ನು ಹೇಳುವದಕ್ಕಾಗಿ. ಸರಿಹೋಯ್ತು. ಅಂತೂ ಮುನ್ನುಡಿಯನ್ನು ಬರೆಯಲೇಬೇಕು.

ಹೀಗೆ ಒಮ್ಮೆ ನಾವು ನಾಲ್ವರು ಹರಟೆ ಹೊಡೆಯುತ್ತಾ, ಕುಟ್ಟುತ್ತಾ, ಹೊಸೆಯುತ್ತಾ ಕುಳಿತಿದ್ದೆವು. ಹೇಗೆ ಪ್ರಾರಂಭವಾಯಿತೋ ಗೊತ್ತಿಲ್ಲ — ಹರಟೆಗೆ ಆರಂಭ ಬೇರೆ ಇರುತ್ತದೆಯೇ? ಎಂದು ಕೇಳಬೇಡಿ – ಅದು ಮಧ್ಯೇ ಹೀಗೆ ಸಾಗಿತು

“ ನಮ್ಮೂರಲ್ಲಿ ಮೊನ್ನೆ ಕಳ್ಳರು ಬಂದು ಒಂದು ಮುದುಕಿಯನ್ನು ಕೊಂದು ಹೋದರಂತೆ. ”

“ ಮುದುಕಿಯನ್ನು ಕೊಂದರೋ ತಾನೇ ಸತ್ತಿತೋ ? ”

“ ನಮ್ಮ ಓಣಿಯಲ್ಲಿ ಒಬ್ಬ ಮುದುಕ ಕೆಮ್ಮುಕೆಮ್ಮುತ್ತಿರಲಿಕ್ಕ ಸತ್ತ. ಮುದುಕರ ಸಾವೇ ಹೀಗೆ ! ”

“ಸಾವಿಗೆ ಮುದುಕರೇನು ಹರೆಯದವರೇನು ? ನಮ್ಮ ಆಪ್ತರಲ್ಲಿ ಒಬ್ಬ ಹುಡುಗ ಎಡವಿ ಬಿದ್ದವನೆ ತಿರಿಯೇ ಹೋದ !”

ಇತ್ತೀಚಿಗೆ ಹುಡುಗರ ದೇಹಪ್ರಕೃತಿಯೇ ಚೆನ್ನಾಗಿರುವದಿಲ್ಲ.”

“ಮನಸ್ಸು ಚಂಚಲವಾಗುವದರಿಂದಲೇ ಹೀಗಾಗುವದು. ಪೂರ್ವದಲ್ಲಿ ಹೀಗಿರಲಿಲ್ಲ.”

“ಸಾಕು ಬಿಡಪ್ಪಾ ! ಪೂರ್ವದಲ್ಲಿರಲಿಲ್ಲವಂತೆ. ತಪಸ್ವಿ ವಿಶ್ವಾಮಿತ್ರನು ಮೇನಕೆಯ ಬೆನ್ನು ಹತ್ತಲಿಲ್ಲವೇ ?”

“ಏನು ಹತ್ತಿದನೋ ಬಿಟ್ಟನೋ ! ಬ್ರಾಹ್ಮಣರು ಕ್ಷತ್ರಿಯರನ್ನು ಕಡಿಮೆ ಮಾಡಲಿಕ್ಕೆ ಹಾಗೆ ಬರೆದಿರಬೇಕು.”

“ಆಗೂ ಬ್ರಾಹ್ಮಣ – ಬ್ರಾಹ್ಮಣೇತರ ವಾದವಿತ್ತೇ ?”

‘ಒಂದು ವಾದವೇ ? ಒಂದು ವಿವಾದವೇ? ಇಡೀ ನ್ಯಾಯಶಾಸ್ತ್ರವನ್ನೇ ಅವರು ರಚಿಸಬಿಟ್ಟರಲ್ಲ. ದಿನ ಬೆಳಗಾದರೆ ನ್ಯಾಯ ಬೆಳೆಸುವದು ಅವರ ಕೆಲಸವೇ ಆಗಿತ್ತು. ಉಣ್ಣತಿನ್ನಲಿಕ್ಕೆ ಸಮೃದ್ಧಿಯಿದ್ದ ಮೇಲೆ ಏಕೆ ಬಿಟ್ಟಾರು ?”

‘ಹಾಗೆನ್ನಬೇಡ. ಈಗ ತಿನ್ನಲಿಕ್ಕೆ ಉಣ್ಣಲಿಕ್ಕೆ ಇಲ್ಲವೆಂದು ನ್ಯಾಯ ಹಚ್ಚುವವರೂ ಬೆಳೆಸುವವರೂ ಇಲ್ಲವೇ ? ಕಾಲವು ಹೇಗೇ ಇರಲಿ. ನ್ಯಾಯ ಹುಟ್ಟಿಸುವವರಿದ್ದರೆ ಅವು ಬೆಳೆದೇ ಬೆಳೆಯುತ್ತವೆ. ನಮ್ಮ ಮನೆ ಇದಿರಿರುವ ವಕೀಲರಿದ್ದಾರಲ್ಲ !”

“ಅವನದು ಬಿಡಪ್ಪ. ನಮ್ಮ ಮನೆಯ ಹತ್ತರ ಒಬ್ಬ ಸುಳ್ಳು ಸಾಕ್ಷಿದಾರನೇ ಇದ್ದಾನೆ ಅದರಿಂದಲೇ ಅವನ ಹೊಟ್ಟೆ ತುಂಬುವದು ಮೊನ್ನೆ ಅವನಿಗೆ ಚೇಳು ಕಡಿದಾಗ ನಿಮ್ಮಿಂದ ನೂರಾ ಎಂಟು ತಪ್ಪುಗಳಾಗಿರಲಿಕ್ಕೆ ಬೇಕು ಎಂದು ನಾನು ಅಂದುಬಿಟ್ಟೆ.”

“ಚೇಳಿಗೂ ತಪ್ಪಿಗೂ ಸಂಬಂಧವೇನು ? ಬೆಳವಲದಲ್ಲಿ ಚೇಳು ಹೆಚ್ಚು. ಮಲೆನಾಡಿನಲ್ಲಿ ಹಾವು ಹೆಚ್ಚು. ಯಾವವು ಎಲ್ಲಿ ಹೆಚ್ಚೋ ಅಲ್ಲಿ ಅವು ಹೆಚ್ಚು ಕಡಿಯಬಹುದು.”

‘ಹಾಗೇನು ಸಂಬಂಧವಿಲ್ಲ. ದೈವದಲ್ಲಿದ್ದಂತೆ ಆಗುತ್ತದೆ.’

“ದೈವವೆಂದು ಹಾವಿನ ಹೆಡೆಯ ಮೇಲೆ ಕಾಲಿಟ್ಟರೆ ಕಡಿ

ಯದೆ ಬಿಡುತ್ತದೆಯೇ ?

"ಪ್ರಲ್ಹಾದನ ಕಥೆ ಗೊತ್ತಿಲ್ಲವೇ ? ದೇವರು ಕಾಯುವವ ನಿದ್ದರೆ ಏನು ಹೆದರಿಕೆ ? "

"ಹಾಗಿದ್ದರೆ ಮೊನ್ನೆ ಮಹಾತ್ಮಾ ಗಾಂಧಿಯವರ ಕಾಲಿಗೆ ತಗಲಿತಲ್ಲ. ದೇವರೇಕೆ ಕಾಯಲಿಲ್ಲ ? "

'ದೇವರಿಗಿಲ್ಲ - ಗೀವರಿಲ್ಲ, ಎಲ್ಲಾ ಹಣೇಬರಹ ! "

"ಹಣೇಬರಹವೆಂದರೆ ಹಣೆಯಲ್ಲಿ ಬರೆದಿರುತ್ತದೆಯೇ ? ನಮ್ಮ ಕರ್ಮ ನಾವು ಉಣ್ಣಬೇಕು. "

"ನಮ್ಮ ಮನೆಯ ಹತ್ತಿರಿನ ಸಾವುಕಾರನು ಬಡವರ ಗೋಣು ಮುರಿದು ಕೊಬ್ಬಿಲ್ಲವೇ ? ಅವನ ಕರ್ಮವೆಲ್ಲಿದೆ ?

"ನಮ್ಮ ಆ ಮಾಮಲೇದಾರರು ಹಣ ಇಟ್ಟ ಬ್ಯಾಂಕ ಮುಳ ಗಿತಂತೆ. ಕರ್ಮಕ್ಕೆ ತಕ್ಕ ಫಲವಾಗಲಿಲ್ಲವೇ ? "

'ಅಯ್ಯೋ, ಈಗಿನ ಬ್ಯಾಂಕುಗಳ ನಿಶ್ಚಯವೇ ಇಲ್ಲ. ಬ್ಯಾಂಕಿನ ವ್ಯವಹಾರ, ಸೂಳೆಯರ ವ್ಯವಹಾರ ಒಂದೇ. "

"ಸೂಳೆಯರೇನು ಸಂಭಾವಿತರೇನು ! ಮೊನ್ನೆ ಆ ಅಕ್ಕಸಾಲಿ ಗರವವನು ಮಂದಿಯ ಒಡವೆ ತಕ್ಕೊಂಡು ಓಡಿಹೋಗಲಿಲ್ಲವೇ ? ನಮ್ಮ ರಾಮಭಟ್ಟರಿಗೂ ನಷ್ಟ ತಗಲಿತು. ಅವರ ಅದ್ವೈತ ವೇದಾಂತವೆಲ್ಲ ಈಗ ಉಳ್ಕಾಡಿ ಹೋಗಿದೆ. "

"ಅದ್ವೈತವೆಲ್ಲಿಯದು ಅದ್ವೈತ ! ದ್ವೈತವೇ ನಿಜ; ಮಧ್ವಾ ಚಾರ್ಯರು ಅವತಾರಿಗಳು ! "

ಈ ಹರಟೆ ಇಲ್ಲಿಗೆ ಸಾಕು. ಓದುವಣ್ಣಗಳಿರಾ, ನಿಮಗೆ ಈ ಹರಟೆಯ ಪ್ರಾರಂಭವು ನೆನಪಿದೆಯೋ ? ಅದು ಹೋಗಲಿ. ಮುಂದೆ ಈ ಹರಟೆ ಎತ್ತ ಹೊರಳುವದೆಂಬುದನ್ನು ಹೇಳಬಲ್ಲಿರಾ ? ಮಧ್ವಾ ಚಾರ್ಯರ ಬಗ್ಗೆ ಮಾತು ಹೊರಡುಬಹುದು ಎಂದು ತಿಳುವಳಿಕ ಯಷ್ಟೆ. ಹಿಂದುಮುಂದಿನ ಸಂಬಂಧ ನಿಶ್ಚಯವಾದ ಮೇಲೆ ಹಂಟ ಯೆಂತಹದು ? ಮುಂದಿನ ಮಾತು ಹೀಗಿದೆ —

"ಆ ಮಾಧ್ವರ ಮಾತೆತ್ತಬೇಡಪ್ಪ ನಿಮ್ಮ ಬಗ್ಗೆ ನಾನು

ಹೇಳುವದಿಲ್ಲ, ನೀವು ಒಳ್ಳೆಯವರು. ನಮ್ಮ ನೆರೆಮನೆಯ ಗೋವಿಂದಾಚಾರಿ ಇರುವನಲ್ಲ - ಶ್ರೀಮದ್ ಮಾಧ್ವ ! ”

ಇದರ ಮುಂದೆ ಕೀಳು ಮಾತು ಬರಬಹುದೋ ಒಳ್ಳೆಯ ಮಾತೊ ? ಒಳ್ಳೆಯ ಮಾತೆನ್ನುವಿರ್ಯಾ ?

“ ಶ್ರೀಮದ್ - ಬ್ಯಾಳಿ - ಹುಳಿ - ಗಂಭೀರ ಎನ್ನು ” ಎಂದು ಮುಂದೆ ಸಾಗಬಹುದು.

ಹೀಗೆಯೇ ಹರಟೆಯ ಜಾತಿ; ಇದಕ್ಕೆ ಶುದ್ಧಹರಟೆ ಎನ್ನುವದು. ಅದರ ವಿರಾಟಸ್ವರೂಪವನ್ನು ನಿರ್ಣಯಿಸುವದು ಅಸಾಧ್ಯವದಿದ್ದು ಗತಿಯನ್ನು ಗೊತ್ತು ಪಡಿಸಬಹುದು. ಹರಟೆಯ ಗತಿಯು ದೇವರಿಗೂ ತಿಳಿಯದು. ಅದೇಕೆ ? ಹರಟೆ ಕೊಚ್ಚುವವರಿಗೂ ತಿಳಿಯದು

೨

ಇಂಥ ಹರಟೆಯನ್ನು ಸಾಹಿತ್ಯಪ್ರಕಾರದಲ್ಲಿ ಸೇರಿಸಿ ಅದಕ್ಕೂ ಮಾನ್ಯತೆಯನ್ನು ತಂದುಕೊಡಲು ಯತ್ನಿಸುವಲ್ಲಿ ಏನು ಪುರುಷಾರ್ಥವೆನ್ನುವಿರಾ ? ಅಸ್ಪೃಶ್ಯರ ಉದ್ಧಾರ, ಸ್ತ್ರೀಯರ ಉನ್ನತಿ, ಶೂದ್ರರಿಗೆ ಸಮಾನಾಧಿಕಾರ, ಸಿನೆಮಾ - ಸೂಳೆಯರ ಸನ್ಮಾನ, ಸೋತವರಿಗೂ ಸ್ವರಾಜ್ಯ — ಇವೇ ಮೊದಲಾದವುಗಳು ಯುಗವಿದು ಯಾವುದು ಹಿಂದೆ ಕೀಳು ಎಂದು ಎಣಿಸಲ್ಪಡುತ್ತಿದ್ದಿತೋ ಅದು ಇಂದು ಮೇಲಾಗಿದೆ. ಮಹಾಕಾವ್ಯ, ನಾಟಕ, ಪ್ರಕರಣ, ಪ್ರಬಂಧ, ಇವುಗಳ ಯುಗವು ಹೋಗಿ - ಹರಟೆ, ಹಾಡು, ಹಾಳು ಕಥೆ ಬೋಳು ಪದ್ಯ, ಹರುಕು ನಾಟಕ ಇವುಗಳ ಕಾಲವು ಬಂದಿದೆ. ಈ ಕೆಡುಕನ್ನೆ ಒಳ್ಳೆಯದೆನ್ನಬೇಕೋ ಹಾಗಾದರೆ ? ಹಾಗಲ್ಲ, ಕೀಳು ಮೇಲಾಗಲಿಕ್ಕೆ ಯತ್ನಿಸಿದರೆ ಅದು ಮೇಲಾಗಬೇಕಾಗುತ್ತದೆ. ಅದರಲ್ಲಿ ಮೇಲುಗುಣಗಳು ಬರುತ್ತವೆ. ಹರಟೆ ಮುಂದಕ್ಕೆ ಬಂದರೆ ಅದು ಇನ್ನು ಶುದ್ಧ ಹರಟೆ ಉಳಿಯಲಾರದು. ಅದರ ಹಳೆಯ

ಕೆಲವು ಗುಣಗಳೇನೋ ಅದರಲ್ಲುಳಿಯಬಹುದು. ಆದರೆ ಅದು ಮತ್ತೆ ಉಳಿದ ಸಾಹಿತ್ಯಪ್ರಕಾರ ಪ್ರಯೋಜನೆಯನ್ನು ಕೊಡದೇ ಹೋಗಲಾರದು.

ಈ ಹರಟೆಯ ಹೊಳೆಯು ಇಂಗ್ಲಂಡಿನ ಚಹಾ ಕಾಫಿ ಕ್ಲಬ್ಬುಗಳಲ್ಲಿ ಉಗಮವಾಗಿ, ಟ್ಯಾಟ್ಲರ, ರಾಂಬ್ಲರ್, ಆಯ್ಡರ್, ಸ್ಪೆಕ್ಟೇಟರ್ ಉಡಾಳ, ಉಂಡಾಡಿ, ದಾರಿಹೋಕ, ವ್ಯೆಗಳ್ಳ ಮೊದಲಾದ ನಾನಾಭಿಧಾನಗಳನ್ನೆ ಧರಿಸಿ ಹೋಟೆ ಪತ್ರಿಕೆಗಳಲ್ಲಿ ಲೀಲಾ ನಿಬಂಧರೂಪವಾಗಿ ಹರಿದು, ಮಧ್ಯೇ ಕೆಲವು ದಿವಸ ಗಂಭೀರ ರೂಪೂನ್ನು ಧರಸಿ, ಈ ಇಪ್ಪತ್ತನೆಯ ಶತಮಾನದಲ್ಲಿ ಮತ್ತೆ ತನ್ನ ಲೀಲಾವತಾರಿತ್ವವನ್ನು ಪ್ರಕಟಿಸಿದೆ. ಲ್ಯೂಕಸ್, ಗಾರ್ಡಿನರ್ ಚೆಸ್ಟರಟನ್ ಮೊದಲಾದವರ ಫೌಂಟನ್‌ಪೆನ್ನುಗಳೊಳಗಿಂದ ನಿರರ್ಗಳವಾಗಿ, ಧಾರಾಳವಾಗಿ, ಸ್ವಚ್ಛಂದವಾಗಿ ಸೊಗಸಾಗಿ ಹರಿಯುತ್ತಲಿದೆ.

ನಮ್ಮ ವರ್ತಮಾನಪತ್ರಿಕೆಗಳಲ್ಲಿ, "ಕಂಠೀರವ" ದ ಸಂಪಾದಕೀಯ ಲೇಖನಗಳಲ್ಲಿಯೂ, ದಕ್ಷಿಣ ಕನ್ನಡದ ಸಾಮಾನ್ಯವಾಗಿ ಎಲ್ಲ ಬಾತ್ಮಿದಾರರ ಪತ್ರವ್ಯವಹಾರದಲ್ಲಿಯೂ "ಪ್ರಬುದ್ಧ ಕರ್ನಾಟಕ" ದ ಸಂಪಾದಕೀಯ ಲೇಖಗಳಲ್ಲಿ ಆಗಾಗ್ಗೆ, "ವಿಶ್ವಕರ್ನಾಟಕ" ದಲ್ಲಿ ಯಾವಾಗಲೂ, ಹಿಂದಕ್ಕೆ ಕೆರೂರ ವಾಸುದೇವಾಚಾರ್ಯರ "ಶುಭೋದಯ" ದಲ್ಲಿ ಮೇಲಿಂದ ಮೇಲೆ ಹರಟೆಯ ಮಿಂಚಿನ ಬಳ್ಳಿಯು ಹರಿದಾಡಿದೆ.

"ಹರಟೆಯ ಮಲ್ಲ" ನು ಸ್ವತಂತ್ರವಾಗಿ ಮೈಸೂರಲ್ಲಿ ಆ ಮೇಲೆ ಜಯಕರ್ನಾಟಕದಲ್ಲಿ, ವಿ. ಸೀತಾರಾಮಯ್ಯನವರು ಕೆಲವು ಸಲ ದೇಶೀಯ ವಿದ್ಯಾಶಾಲೆಯಲ್ಲಿ, ವೆಂಕಟೇಶಯ್ಯನವರು "ಘುಲ್ಲಯ್ಯನ ಪ್ರಬಂಧ" ಗಳಲ್ಲಿ, 'ರಾ. ಶಿ' ಯವರು ಅಲ್ಲಲ್ಲಿ ಲೇಖನಗಳಲ್ಲಿ ಕಾವ್ಯಾನಂದ ಪುಣೇಕರವರು ಉತ್ತರ ಕರ್ನಾಟಕದ ಅನೇಕ ವರ್ತಮಾನಪತ್ರ ಮಾಸಪತ್ರಿಕೆಗಳಲ್ಲಿ ಹರಟೆಯ ವಿಧವಿಧವಾದ ಹೊಳವು ಹಾಕಿದ್ದಾರೆ. ಇತ್ತೀಚೆ "ಲೋಕಮತ" "ನವಕರ್ನಾಟಕ" "ಕರ್ಮವೀರ" 'ಕನ್ನಡಿಗ', 'ಕರ್ನಾಟಕ

ವೈಭವ" "ಕರ್ನಾಟಕ ಧುರೀಣ" ನವಯುಗ„ ಪತ್ರಿಕೆಗಳಲ್ಲಿಯು "ಬೀದಿಯ ಬಸವ" 'ಹಳ್ಳಿಯ ಮುಕ್ಕ', "ಮಾತಿನ ಮಲ್ಲ" "ಚಿತ್ರಗುಪ್ತ" "ಚೇಳಿನಕೊಂಡಿ" "ಅಪ್ಪಾಭಟ್ಟ" "ತುಣುಕು ಮಿಣುಕಿನವ" "ನೋಟಗಾರ" ಮೊದಲಾದವರ ನಗೆಬರಹಗಳು ಜನರಂಜನವನ್ನು ಮಾಡಲಿಕ್ಕೆ ಯತ್ನಿಸುತ್ತಾ ಇವೆ. ಹಾಗೆ ನೋಡಿದರೆ ನಮ್ಮ ಸಾಹಿತ್ಯದಲ್ಲಿ ಹರಟೆಯು ತೀರ ಕೂಸು. ಅದರ ಚಿನ್ನಾಟ ತೀರಿ ಹುಡುಗಾಟಕ್ಕೂ ಪ್ರಾರಂಭವಾಗಿಲ್ಲ.

೩

ಹಳೆ ಹರಟೆಯು ಮನೆತನ ದೊಡ್ಡದು. ರಾಜರ ಸುಖಸಂಕಥಾವಿನೋದದಲ್ಲಿ ಮೊಳೆತು, ಪಂಡಿತರ ಕಾವ್ಯಶಾಸ್ತ್ರ ವಿನೋದದಲ್ಲಿ ಚಿಗಿತು, ಕವಿಗಳ ಅಕ್ಕರಗೊಟ್ಟಿಯಲ್ಲಿ ಬೆಳೆದು ವೇಶ್ಯಾವಾಟದ ವಿಟವಿದೂಷಕರಲ್ಲಿ ಶಾಖೋಪಶಾಖೆಯಾಗಿ, ಚದುರೆಯರ ಮಾತಿನಲ್ಲಿ ಹೂತು, ವಿಲಾಸವಿಲಾಸವಾಗಿ ಅದು ನಾಟ್ಯವಾಡಿದೆ. ಇಂದು ಇನ್ನೊಂದು ಮನ್ವಂತರಕ್ಕೆ ಮೊದಲಾಯಿತು

ಹಳೆಯದರ ಒನಪು ಒಯ್ಯಾರ, ಒಡವೆ ಸಿಂಗಾರಗಳನ್ನು ನಾವು ಬಿಡಕೂಡದು ವಕ್ರೋಕ್ತಿಯ ರೀತಿ, ಸುಭಾಷಿತಗಳ ಚಮತ್ಕಾರ, ಅನ್ಯೋಕ್ತಿಯ ಬೆಡಗು, ಕಿರಿಮಾತು — ಕುಸುರಿ ಮಾತು - ಶ್ಲೇಷೋಕ್ತಿ, ವ್ಯಾಜೋಕ್ತಿ ಮೊದಲಾದ ಉಕ್ತಿಪ್ರಕಾರಗಳು, ಹಾಸ್ಯದಲ್ಲಿದ್ದ ಉಪಮೆ, ರೂಪಕಾದಿಗಳು, ಮಾತಿನಜಾಣರ ಮುಂಗಾಲ ಪುಟಿಗೆಯ ಮಾತು, ಕುಹಕರ ಕೊಂಕು ಕೊಳಕಮಾತು, ಮೂದಲಿಸುವವರ ಅಣಕದ ಮಾತು, ಹರಿಕಥೆಯವರ ಅಡ್ಡ ಕಥೆ ಅಡ್ಡ ಮಾತು ಅಡ್ಡ ನಗೆ ಇವೆಲ್ಲವೂ ಇಂದಿನ ಹರಟೆಗೆ ಸಂಸ್ಕಾರವನ್ನು ಕೊಡುವವು. ಹೀಗೆಂದಷ್ಟಕ್ಕೆ ಹರಟೆ ಶುದ್ಧ ಹುಡುಗಾಟವೆಂದು ತಿಳಿಯಲಾಗದು. ಅದರದೊಂದು ಗಾಂಭೀರ್ಯವೆಂಬುದಿದೆ. ಪೋಕರಿತನದ ಹರಟೆಯಿದೆ, ಸಜ್ಜನಿಕೆಯ ಹರಟೆಯಿದೆ. ಪೊಳ್ಳು ಹರ

ಟೆಯೂ ಇದೆ. ಹುರುಳಿಲ್ಲದ ಹರಟೆಯೂ ಇದೆ. ಹರಟೆಯು ದಟ್ಟಡಿಯಿಟ್ಟು ಎಲ್ಲ ಮಾರ್ಗ ಪದ್ಧತಿಗಳಲ್ಲಿಯೂ ನಡೆದಾಡಿ ಬರತಕ್ಕುದೆ. ಹರಟೆಗಾರನ ಸ್ವಭಾವಾನುಗುಣವಾಗಿ ಆ ಆ ಹರಟೆಗೆ ಒಂದು ಲಕ್ಷಣವು ಸ್ಥಾಯಿಯಾಗಿರಬಹುದು. ಆದರೆ ವಿವಿಧ ಸಂಚಾರದಿಂದಲೇ ತನ್ನ ತನ್ನ ಸ್ಥಾಯಿಯ ಅರಿವು ಅವರವರಿಗೆ ಆಗಬೇಕು.

ಸಾಮಾನ್ಯ ಜನರು ಗಂಭೀರ ವಿಷಯಗಳಿಗೆ ಬೇಸರಿಯುವದರಿಂದಲೂ, ಅಕುಟಿಲ ಹಾಸ್ಯವು ಹಿರಿಯರಿಗೂ ರಂಜಿಸುವದರಿಂದಲೂ ಕೊಂಕುವೆತ್ತ ಮೊನ ಸುಡಿಯು ನೇರವಾಗಿ ಎದೆಯನ್ನು ನೇರುವದರಿಂದ ಹರಟೆಯು ಜಡಾನ್ನವಾಗದೆ ವ್ಯಂಜನಪಧಾರ್ಥ ಮಿಶ್ರವಾದ ಅಲ್ಪಾಹಾರದಂತೆ ಸೊಗಸಾಗುವದರಿಂದಲೂ, ದಿನಾಲು ವಿರಾಮು ಕಾಲಕ್ಕೆ ವಿನೋದವಾಗಿ ಏನಾದರೂ ಓದಲು ದೊರೆಯಬೇಕೆಂಬ ಜನರ ಸಂಖ್ಯೆಯು ಬೆಳೆಯುತ್ತಿರುವದರಿಂದಲೂ ಈ ಸಾಹಿತ್ಯಪ್ರಕಾರಕ್ಕೆ ಒಂದು ಕಳೆ ಬರಲಿದೆ. ಹಾಗೆ ಕಲೆಗೆ ಯುಕ್ತವಾದ ಕಳೆಯು ಇದಕ್ಕೂ ಬಂದರೆ ಇದೂ ಉಳಿಯಬಹುದು. — ಇಲ್ಲದಿದ್ದರೆ ಅಳಿಯಬಹುದು

**— ದ ರಾ. ಬೇಂದ್ರೆ**



# ಹರಟೆಗಳು

೧ ನನ್ನ ಅವತಾರ
೨ ಸಾವಿನ ಕೂಡ ಸರಸ
೩ ಮಾನಪತ್ರ ಸಮಾರಂಭ
೪ ಕಸಬರಿಗೆ
೫ ಉಗುಳುವದು
೬ ಸಾರ್ವಭೌಮ–ನಿರಂತರ–ವರ್ಷಾಭವಿಷ್ಯ
೭ ಹಸ್ತಸಾಮುದ್ರಿಕದ ಪ್ರಥಮಪಾಠಗಳು
೮ ವಿಮರ್ಶೆಯನ್ನು ಹೇಗೆ ಮಾಡಬೇಕು ?

# ನನ್ನ ಅವತಾರ



"ದೇವರು ಒಬ್ಬನೇ ಇದ್ದಾನೆ; ನಾನು ಒಬ್ಬನೇ ಇದ್ದೇನೆ; ಆದ ಕಾರಣ ನಾನು ದೇವರು."

— "ನನ್ನ ವಚನ" ದಿಂದ

**ಅಹಂ ಬ್ರಹ್ಮಾ ಅಹಂ ವಿಷ್ಣುಃ ಅಹಂ ದೇವೋ ಮಹೇಶ್ವರಃ ।**
**ಅಹಂ ಸಾಕ್ಷಾತ್ಪರಂ ಬ್ರಹ್ಮ ತಸ್ಮಾದ್ಮಾಂ ನಮಥ ಮಾನವಾಃ**

## ನನ್ನ ಪೂರ್ವಚರಿತ್ರೆ

ನಾನು ಯಾರು, ಇದರ ಗೊಡವೆ ನಿಮಗೇಕೆ? ನಾನು ದೇವರು. ನನ್ನ ಹೆಸರುದೆಸೆಗಳಿಂದ ನಿಮಗೇನು? ತಂದೆತಾಯಿಗಳ ಗೌರವದಿಂದಾಗಲಿ, ಜಾತಿಕುಲಗಳ ಮಹಿಮೆಯಿಂದಾಗಲಿ, ನಾಮ ನಾಮರೂಪಗಳ ಹೆಮ್ಮೆಯಿಂದಾಗಲಿ ನನ್ನ ದೇವತ್ವಕ್ಕೆ ಸಾಧಕ-ಬಾಧಕವೇನು ಇಲ್ಲ. ಎಂದ ಮೇಲೆ ಅದರ ಗೊಡವೆ ನನಗೇಕೆ? ನನ್ನ ಜನ್ಮ ಕರ್ಮಗಳನ್ನು ಹೇಳುವದರಲ್ಲೂ ಅರ್ಥವಿಲ್ಲ ಸ್ವಾರ್ಥವಿಲ್ಲ-ಸ್ವಾರಸ್ಯವಿಲ್ಲ ಪೂರ್ವಚರಿತ್ರವನ್ನು ಹೇಳುವ ವಾಡಿಕೆಯಿರುವದರಿಂದ ನಾನು ಏನಾದರೊಂದು ಹೇಳಲೇಬೇಕು. ಎಂದೇ ಕೆಲ ಮಾತುಗಳನ್ನು ಹೇಳುತ್ತೇನೆ. ಅದರಿಂದ ನಿಮ್ಮ ತೃಪ್ತಿಯಾಗಲಿ, ಬಿಡಲಿ.

ನಾನು ಚಿಕ್ಕಂದಿನಲ್ಲಿಯೇ ಬಾಳುವೆಗೆ ಬೇಸತ್ತವನಂತೆ ಇರುತ್ತಿದ್ದುದರಿಂದ ನಾನು ಬೈರಾಗಿಯಾಗಿ ದೇಶಾಂತರಕ್ಕೆ ಹೋಗಬಹು

ಆಗಲಿಲ್ಲ. ಮುಂದೆ ನಾನು ಮದುವೆಯಾದ ಮೇಲೆ ವೇದಾಂತ ಗ್ರಂಥಗಳನ್ನು ಓದಹತ್ತಿದೆನು. ಅದರ ಸಂಸರ್ಗದಿಂದ ನಾನು ಸನ್ಯಾಸಿಯಾಗಬಹುದೆಂದು ನನ್ನ ಹೆಂಡತಿ ಹೆದರಿದ್ದಳು. ಹಾಗೂ ಆಗಲಿಲ್ಲ. ಶರಣರ ವಚನ, ದಾಸರ ಪದ, ಸಂತರಚರಿತ್ರೆ ಮೊದಲಾದವುಗಳನ್ನು ನನ್ನ ಸಂಗ್ರಹದಲ್ಲಿ ಕಂಡು ಕಂಡು ನಾನು ಸಾಧುವಾಗಬಹುದೆಂದು ನನ್ನ ಮಕ್ಕಳು ಬೆದರಿದ್ದರು ಆ ಕುತ್ತವೂ ದಾಟಿತು. ಕಲ್ಕಿ ಅವತಾರ, ಚನ್ನಬಸವನ ಅವತಾರ, ಜಗದ್ಗುರುಗಳ ಅವತಾರ ಮೊದಲಾದ ಇಂದಿನ ವಿಭೂತಿಗಳ ಮಹಿಮೆಗಳು ನನ್ನ ಕಣ್ಣಿಗೆ ಬಿದ್ದ ಹಾಗೆಲ್ಲ ನಾನೂ ಎಲ್ಲಿ ಅವತಾರವಾಗುವೆನೋ ಎಂಬ ಭಯವು ನನಗೇ ಉಂಟಾಯಿತು. ಮೂರು ಕುತ್ತುಗಳನ್ನು ದಾಟಿ ನಾನು ಅವತಾರವಾಗಬೇಕೆಂದು ನನ್ನ ಹಣೇಬರಹದಲ್ಲಿದ್ದುದರಿಂದಲೋ, ಭೀತನ ಹಿಂದೆಯೆ ಭೂತ ಎಂಬಂತೆ, ಅವತಾರ - ಅವತಾರ ಎಂಬ ಹೆದರಿಕೆಯ ನಿದಿಧ್ಯಾಸದಿಂದಲೋ ನಾನು ಕೆಲವು ದಿನಗಳ ಪೂರ್ವದಲ್ಲಿ ಹೀಗೆಯೆ ಅವನ್ನೆ ಧ್ಯಾನಿಸುತ್ತ ಕುಳಿತಿರಲಾಗಿ ಒಮ್ಮಿಂದೊಮ್ಮೆ ಅವತಾರವಾಗಿಬಿಟ್ಟೆ. ಇದೇನು ಅವತಾರ? — ಎಂದು ನೀವು ಬೆಚ್ಚಿ ಕೇಳಬಹುದು ಆಗಿಹೋಗಿದ್ದಕ್ಕೆ ಉಪಾಯವಿಲ್ಲ ನಾನು ಇನ್ನು ಮೇಲೆ ಯಾರು ಏನು ಮಾಡಿದರೂ ಸಾಮಾನ್ಯ ಮನುಷ್ಯನಾಗುವದು ಸಾಧ್ಯವಿಲ್ಲ ಅಂದು ಅವತಾರವಾದವನು ಇಂದಿಗೂ ಅವತಾರವಾಗಿಯೇ ಉಳಿಯತಕ್ಕವನು ಎಂಬಲ್ಲಿ ಯಾವ ಸಂದೇಹವೂ ಇಲ್ಲ. ಇದನ್ನು ಯಾರೂ ನಂಬಲಿ, ಬಿಡಲಿ

## ನನ್ನ ಅವತಾರದ ಕುರುಹೇನು ?

ನನ್ನ ಅವತಾರದ ಕುರುಹೇನೆಂಬುದನ್ನು ನಾನು ಹೇಳುವದೂ ತಪ್ಪು, ನೀವು ಕೇಳುವದೂ ತಪ್ಪು. ಕುರುಹಿನಿಂದಲೇ ಅವತಾರ ಸಿದ್ಧಿಯಾಗುವದೇ ಇದ್ದರೆ ಅದು ಅವತಾರವೇ ಅಲ್ಲ ಎಂದು ನನ್ನ

ಮತ ಆದರೆ ಏನು ಮಾಡುವದು ? ಅವತಾರಮಾಲಿಕೆಯಲ್ಲಿ ಸೇರಿದ ಮೇಲೆ ಆ ಪರಂಪರೆಯನ್ನು ಸಾಗಿಸಲೇಬೇಕು. ಕುತ್ತಿಗೆಯ ಮೇಲೆ ಚಕ್ರ, ಎದೆಯ ಮೇಲೆ ಪಾದ, ಕಾಲಲ್ಲಿ ಆನೆ, ಕೈಯಲ್ಲಿ ಶಂಖ, ಕಣ್ಣಲ್ಲಿ ಹೂ, ಒಂದೇ ಎರಡೇ ? ಸಕಲ ಲಕ್ಷಣಸಂಪನ್ನ ನಾಗಿದ್ದೇನೆ ಇನ್ನು ಜನ್ಮಕುಂಡಲಿಕ ವಿಚಾರ. ಪಂಚಾಂಗಗಳ ಮೇಲೆ ಕೆಟ್ಟಿರುವ ಶ್ರೀರಾಮ, ಶ್ರೀಕೃಷ್ಣರ ಕುಂಡಲಿಗಳಿಗೆ ಸರಿಹಚ್ಚಿ ನೋಡ ಲಾಗಿ ನನ್ನ ಜನ್ಮಕುಂಡಲಿಕವು ಅವುಗಳಿಗಿಂತ ದೊಡ್ಡದಾಗಿ ಕಂಡು ಬಂದೀತು. ಇಷ್ಟೇ ಅಲ್ಲ, ಅವುಗಳಿಗಿಂತ ನನ್ನದರಲ್ಲಿ ನೆಪ್ಚ್ಯೂನ್, ಯುರ್‍ಯಾನಸ್‌ದಂಥ ಎರಡು ಮೂರು ಹೆಚ್ಚು ಗ್ರಹಗಳಿವೆ. ರಾಮ ಕೃಷ್ಣರಿಗಿಂತ ನನ್ನ ಕುಂಡಲಿಕವು ಒಂದು ತೂಕ ಹೆಚ್ಚೇ ಆಗು ವದು. ಚೆನ್ನಾಗಿ ಕಟ್ಟು ಹಾಕಿಸಿ ಇಟ್ಟಿದ್ದೇನೆ ! ಪುರಾಣಾಂತರ ಗಳಲ್ಲಿ ಪ್ರಮಾಣವೇನಾದರೂ ಇದೆಯೆ ? ಎಂದು ನೀವು ಕೇಳು ತ್ತೀರಿ, ನನಗೆ ಗೊತ್ತು ! ಬ್ರಿಟಿಷ್ ಸಾಮ್ರಾಜ್ಯದ ಇತಿಹಾಸ ಓದಿ ದವರೂ, ಜಗತ್ತಿನ ಭೂಗೋಲವನ್ನು ತಿರುವಿಹಾಕಿದವರೂ, ಆರೋ ಗ್ಯಶಾಸ್ತ್ರ ಮೊದಲಾದವುಗಳನ್ನು ಬಲ್ಲವರೂ ಆದ ನೀವು ಪ್ರತ್ಯಕ್ಷ ಇದ್ದರೂ, ಪ್ರಮಾಣಿಸಿ ನೋಡತಕ್ಕವರೇ ಸರಿ. ಅದು ನಿಮ್ಮದೇನೂ ತಪ್ಪಲ್ಲ. ನನ್ನ ಅವತಾರದ ಬಗ್ಗೆ ಭವಿಷ್ಯತ್ಪೂರ್ವಪುರಾಣದಲ್ಲಿ ಆಧಾರವಿದೆ. ಆದರೆ ಅದು ದುರ್ಲಭ; ಸಿಗುವಂತೆ ಇಲ್ಲ; ಇಲ್ಲೆ ಇಲ್ಲ. ಅಂದರೇನು ? ಭವಿಷ್ಯೋತ್ತರ ಪುರಾಣವು ಇದೆ, ಆದರೆ ಅದರಲ್ಲಿ ನನ್ನ ಅವತಾರದ ಬಗ್ಗೆ ಆಧಾರವಿಲ್ಲ ! ಇದ್ದದ್ದರಲ್ಲಿ ಆಧಾ ರವಿಲ್ಲ, ಇಲ್ಲದ್ದರಲ್ಲಿ ಆಧಾರವಿದೆ. ಹೀಗಾದ್ದರಿಂದ ಲೋಕಾನುಗ್ರಹ ಕ್ಕಾಗಿ ನಾನೇ ನೆನಪಿದಿಂದ ಆ ಆಧಾರಶ್ಲೋಕವನ್ನು ಈ ಲೇಖದ ಮುಡಿಯಲ್ಲಿ -ಬರೆದಿದ್ದೇನೆ. ಇಂಥ ಶಬ್ದಪ್ರಾಮಾಣ್ಯದಲ್ಲಿ ನಿಮ್ಮ ವಿಶ್ವಾಸ ಇಲ್ಲದಿದ್ದರೆ, – ಈ ಯುಕ್ತಿಯಿದೆ. ಅದರಿಂದ ನಿಮ್ಮ ಸಮಾಧಾನವಾದರೆ ನೋಡಿರಿ. ವೇದಗಳಿಗೇ ನನ್ನ ನೆಲೆಹತ್ತಲಿಲ್ಲ; ಇನ್ನು ಪಾಪ, ಪುರಾಣಗಳ ಕಥೆಯೇನು ? ಪುರಾಣದಲ್ಲಿ ಆಧಾರವಿ ದ್ದವುಗಳು ಅವತಾರಗಳೇ ಅಲ್ಲ ! ಹಾಗಾದರೆ ಭವಿಷತ್‌ಪೂರ್ವ

ಪುರಾಣದಲ್ಲಿ ನನ್ನ ಅವತಾರಕ್ಕೆ ಆಧಾರವಿದೆ, ಅದರ ಗತಿಯೇನು ಎನ್ನುವಿರಾ ? ಇದಕ್ಕೆ ನನ್ನ ಉತ್ತರವೇನೆಂದರೆ - ಆ ಹೆಸರಿನ ಪುರಾಣವೇ ದೊರಕುವದಿಲ್ಲ – ಇಲ್ಲ. ಒಂದೊಪ್ಪತ್ತು ನಾನೇ ಹೇಳಿದಂತೆ ಇದೆಯೆಂದು ತಿಳಿದರೂ ನಾನು ಕೊಟ್ಟ ಶ್ಲೋಕದ ಪೂರ್ವಾಪರ ಸಂಬಂಧ ತಿಳಿಯುವಂತಿಲ್ಲ. ಇದ್ದಕ್ಕಿದ್ದಂತೆ ಅರ್ಥಮಾಡಿದರೂ ನಾನೇ ಆ ಅವತಾರ ಎಂಬುದು ಸಿದ್ಧವಾಗುವದಿಲ್ಲ. "ಆದೇಕೆ ಆಗುತ್ತದೆ" - ಎಂದು ನೀವು ಹಟ ಹಿಡಿದರೆ, ಹಾಗೇ ಆಗಲಿ. ನಾನು ಅವತಾರವೆಂದು ನಿಮಗೆ ಹೇಗೂ ಒಪ್ಪಿಗೆಯಾದರೆ ಸಾಕು. ಇದೇನು ಕುಯುಕ್ತಿ ? ಎಂದು ಸಿಟ್ಟಿಗೇಳಬೇಡಿ. ಶಬ್ದ, ಯುಕ್ತಿ ಎರಡೂ ನಿಮಗೆ ಒಪ್ಪಿಗೆ ಇಲ್ಲದಿದ್ದರೆ ಅನುಭವ ಹೇಳುತ್ತೇನೆ. "ನಾನು ಅವತಾರ" ಎಂದು ನನ್ನ ಅನುಭವವಿದೆ ಇದಕ್ಕೂ ಹೆಚ್ಚಿನ ಆಧಾರವೇನು ಬೇಕು ? ಮೇಲಾಗಿ 'ನನ್ನ ವಚನ' ವನ್ನು ಮೊದಲೇ ಉದ್ಧರಿಸಿದ್ದೇನೆ.

ಶಬ್ದ, ಯುಕ್ತಿ, ಅನುಭವ ಈ ಮೂರೂ ನಿಮಗೆ ಪ್ರಮಾಣಗಳಾಗದಿದ್ದರೆ ನಿಮ್ಮ ಪ್ರಮಾಣಿಕತನವೆಲ್ಲುಳಿಯಿತು ? ಇನ್ನು ನನ್ನ ಅವತಾರದ ಬಗ್ಗೆ ಯಾರಿಗಾದರೂ ದೃಷ್ಟಾಂತವಾಗಿತ್ತೇ ? ಕನಸು ಬಿದ್ದಿತ್ತೆ, ? ಕಣಿ ಹೇಳಿದರೆ ? ಅಯ್ಯೊ ನಮ್ಮಪ್ಪಗಳಿರಾ ! ನನ್ನ ಕನಸು ಮನಸಿನಲ್ಲಿಯೂ ಇಲ್ಲದ್ದು ಇನ್ನೊಬ್ಬರ ಕನಸು - ಮನಸುಗಳಲ್ಲಿ ಹೇಗೆ ಬಂದಿತು ? ನಾನು ಹೇಳಲಿಲ್ಲವೇ, ಒಮ್ಮಿಂದೊಮ್ಮೆ ಅವತಾರಿಯಾದೆನೆಂದು ? ಇದನ್ನು ನೀವು ಒಪ್ಪಿರಿ, ಬಿಡಿರಿ.

## ನನ್ನ ಅವತಾರದ ಬಗ್ಗೆ ಸಂಶಯ

ನಾನು ಅವತಾರಿಯಾದ ಮೇಲೆ ನನ್ನಲ್ಲಿ ಏನೂ ಮಾರ್ಪಾಡಾಗಲಿಲ್ಲ ಎಂದು ನನ್ನ ಅವತಾರದ ಬಗ್ಗೆ ಕೆಲವರಿಗೆ ಹುಚ್ಚು. ಹತ್ತು ಆಗಿ ಹೋದಮೇಲೆ ಹನ್ನೊಂದನೆಯದೆಲ್ಲಿಂದ ಬಂದೀತು ? ಹಣ್ಣಿನ ಗುಣವು ಹೀಚಿನಲ್ಲಿ ಕಾಣವದೆಂದು ಹೇಳುವಂತೆ ನನ್ನ ಅವತಾರದ

ಬೀಜವು ನನ್ನ ಬಾಲಲೀಲೆಯಲ್ಲಿತ್ತೇ ? ಒಂದಿಷ್ಟೂ ಶಬ್ದಪ್ರಾಮಣ್ಯ ವಿಲ್ಲದ್ದು ಇದೆಂಥ ಅವತಾರ ? ಇವೇ ಮೊದಲಾದ ಸಂಶಯಗಳು ಗಳು ಕೆಲವರನ್ನು ಭಾಧಿಸುತ್ತಿವೆ.

ಹುಚ್ಚಪ್ಪಗಳಿರಾ ! " ಸಂಶಯಾತ್ಮನು ಸತ್ತು ಹೋಗುವನು " ಎಂಬ ನನ್ನ ಪೂರ್ವಾವತಾರದ ವಚನವು ನಿಮಗೆ ನೆನಪಿಲ್ಲವೇ? ನಂಭದೆ ಕೆಡಬೇಡಿರಿ; ಮಾರ್ಪಾಟಾಗುವದು ಮನುಷ್ಯ ಲಕ್ಷಣ. ನಾನು ಅವತಾರಿ. ನನ್ನಲ್ಲಿ ಮಾರ್ಪಾಟಿಂದರೇನು ? ನಾನು ಅವತಾರಿ ಎಂಬ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಮಾರ್ಪಾಟಾಗಬೇಕು ಹನ್ನೊಂದರ ಮೇಲೆ ಇನ್ನೊಂದು ಅವತಾರವಾದರೂ ತಪ್ಪೇನು ? ದೇವರೇನು ಶ್ರುತಿ ಪುರಾಣಗಳ ಆಳೇ ? ಅವನು ಯಜಮಾನ ! ತನ್ನ ಮಾತನ್ನು ಮೀರಲು ತನಗೇ ಬರಬಾರದೇ ? ಇಷ್ಟಾಗಿಯೂ ರನ್ನ ಕವಿಗೆ ಹನ್ನೊಂದನೆಯ ಅವತಾರದ ವಿಚಾರವು ಹೊಳೆದಿತ್ತು, ರವಿ ಕಾಣದ್ದು ಕವಿ ಕಾಣುವನು. ಇದಲ್ಲದೆ ವಿಷ್ಣುವು ಆದಿತ್ಯರಲ್ಲೊಬ್ಬ ಆದಿತ್ಯರು ಹನ್ನೆರಡು. ಈ ಪ್ರಕಾರ ವಿಷ್ಣುವಿಗೆ ಹನ್ನೆರಡು ಅವತಾರಗಳಾಗ ಬೇಕು. ಹೋಗಲಿ; ಪುರಾಣಗಳಲ್ಲಿ ಹರಿ–ಹರರ ಹಾವೇರಿ ನ್ಯಾಯ ವಾಗಿ ಹರಿ ಹೆಚ್ಚಲ್ಲ, ಹರ ಕಡಿಮೆಯಲ್ಲ, ಇಬ್ಬರು ಸಮಾನರು, ಎಂದು ಗೊತ್ತಾಗಿಲ್ಲವೆ ! ರುದ್ರರು ಹನ್ನೊಂದು. ವಿಷ್ಣುವಿಗೆ ಹನ್ನೊಂದ ನೆಯ ಅವತಾರವೂ ಬೇಡವೇ ? ನಾನೇ ಆ ಅವತಾರ ಸೂಕ್ಷ್ಮ ವಾಗಿ ನೋಡಿದರೆ, ನನ್ನ ಬಾಲಲೀಲೆಗಳಲ್ಲಿ ನನ್ನ ಅವತಾರದ ಮುಂಗುರುಹು ಕಾಣುವಂತಿದೆ ನಾನು ಸಣ್ಣವನಿದ್ದಾಗ್ಗೆ ಒಮ್ಮೆ ಹನ್ನೊಂದು ಉಂಡೆಗಳನ್ನು ತಿಂದು ಅಪಚನಮಾಡಿಕೊಂಡು ಪೇಚಾಡಿದೆ ಎಂದು ನಮ್ಮಮ್ಮ ಹೇಳುತ್ತಿದ್ದಳು. ಅಪಚನ–ಗಿಪಚನದ ಕಥೆ ಸುಳ್ಳಿರಲಿಕ್ಕೆ ಬೇಕು. ನಾನು ಮತ್ತೊಮ್ಮೆ ಬಹಳ ಉಂಡೆಗಳನ್ನು ತಿನ್ನಬಾರದೆಂದು ಹಾಗೆ ಅವಳು ಹುಟ್ಟಿಸಿ ಹೇಳುತ್ತಿರಲಿಕ್ಕೆ ಸಾಕು. " ಸಣ್ಣವನು ಇದ್ದಾಗ್ಗೆ ಹನ್ನೊಂದು ಉಂಡೆಗಳು ! " ನಿಜವಾಗಿ ಅವತಾರ ! ಇನ್ನೊಂದು ಕಥೆ. ನಾನೇನೋ ಒಮ್ಮೆ ಕಳವು ಮಾಡಿ ಮನೆ ಬಿಟ್ಟು ಓಡಿ ಹೋಗಿದ್ದೆನಂತೆ ಕಳವು–ಗಿಳವು ಶುದ್ಧ ಸುಳ್ಳು ಅಂಥ ಚಿಕ್ಕ

ವಯಸ್ಸಿನಲ್ಲಿ ಮನೆ ಬಿಟ್ಟು ಹೋಗುವಷ್ಟು ವೈರಾಗ್ಯವು ನನ್ನಲ್ಲಿ ಇತ್ತೆಂದ ಮೇಲೆ ನನ್ನ ಅವತಾರದ ಪ್ರಸ್ತಾವನೆಯೆ ಅಲ್ಲವೇ ಅದು ? ಮೊದಲಿಗಾಗಿ ಎರಡು ಕಥೆ ಹೇಳಿದ್ದೇನೆ. ಇಂಥವು ಇನ್ನೂ ಎಷ್ಟೋ! ಇನ್ನು ಶಬ್ದ ಪ್ರಮಾಣ್ಯದ ಪೂರ್ವದಲ್ಲಿ ನನ್ನ ಅವತಾರದ ಮರ್ಮ ವನ್ನು ಹೇಳುತ್ತೇನೆ. ಬಹಳ ಹಿಂದೆ ಹೋಗುವ ಕಾರಣವಿಲ್ಲ. ನರ ಸಿಂಹಾವತಾರದಿಂದ ಪ್ರಾರಂಭ ಮಾಡುತ್ತೇನೆ ಅಲ್ಲಿಂದ ಒಂದು ಉಗ್ರ ಒಂದು ಸೌಮ್ಯ. ನರಸಿಂಹ-ವಾಮನ, ಪರಶುರಾಮ-ರಾಮ; ಕೃಷ್ಣ ಬುದ್ಧ; ಕಲ್ಕಿ-ಮುಂದೆ ಹೇಳಿ ನೋಡುವಾ ? ಸೌಮ್ಯವಾದ ಅವತಾರ ವೊಂದು ಬೇಕೋ ಬೇಡವೋ ? ಆ ಅವತಾರವೇ ನಾನು. ಯಾವ ಅವತಾರ ? ಕೊನೆಯದು ಕಲಕೀ ಅವತಾರ. ನನ್ನಲ್ಲಿ ಕಲ್ಕಿ-ಗಿಲ್ಕಿ ಏನೂ ಇಲ್ಲ. ನಾನು ಶುದ್ಧ ಸ್ವಯಂಭು ! ನನ್ನ ಹಿಂದಿನ ಸೌಮ್ಯ ಅವತಾರ ಬುದ್ಧ; ನಾನು ಸುಸ್ತ ! ವಾಮನ ತಿರುಕ; ರಾಮ ಅಡವಿ ತಿರುಕ, ಬುದ್ಧ ಬತ್ತಲೆತಿರುಕ ಮೂರಕ್ಕೆ ತಿರುಗುವ ಮುಕ್ತಾಯ ವಾಗಿ, ನನ್ನ ಸ್ವಯಂಭು ಸುಸ್ತಾವತಾರವು ತೀರ ಮನೆ ಹಿಡಿದು ಬಿದ್ದು ಕೊಂಡಿದೆ. ಏಕೆ ? ಇದೆಲ್ಲವೂ ಸಮಂಜಸವಾಗಿದೆಯೋ ಇಲ್ಲವೋ ? ತಿಳಿದವರಿಗೆ ಹೆಚ್ಚು ಹೇಳುವದೇನು ? ಈಶೋಪನಿಷ ತ್ತಿನಲ್ಲಿ "ಸ್ವಯಂಭು" ಅವತಾರದ ಬಗ್ಗೆ ಭವಿಷ್ಯವಿದೆ. ಇದಕ್ಕೂ ಹೆಚ್ಚು ಚಿಕಿತ್ಸೆ ಮಾಡತಕ್ಕವರು 'ಉಪನಿಷತ್ ಶಬ್ದಸೂಚಿ' ಯನ್ನು ನೋಡಬೇಕು. ಈ ಕೆಲಸವನ್ನೆಲ್ಲ ನನ್ನ ವೈರಿಗಳಾದರೂ ಇದ್ದರೆ ಅವರು ಮಾಡಬೇಕು, ನಾನೇಕೆ ? ನನಗೆ ನನ್ನ ಅವತಾರದ ಬಗ್ಗೆ ಸಂಶಯವಿಲ್ಲ. ಪ್ರಮಾಣವಿರಲಿ, ಇರದಿರಲಿ.

## ನನ್ನ ಮಹತ್ತ್ವ ಮತ್ತು ಅವತಾರಕಾರ್ಯ

ಈ ಅವತಾರದಲ್ಲಿ ನಾನು ಏನೂ ಕೆಲಸವನ್ನಿಟ್ಟುಕೊಂಡಿಲ್ಲ. ಇದೇ ಈ ಅವತಾರದ ಮಹತ್ತ್ವ. ಹತ್ತು ಅವತಾರಗಳಲ್ಲಿ ಎಷ್ಟು ತಿದ್ದುಪಡೆ ಮಾಡಿಯೂ ಜಗತ್ತಿನ ಸೊಟ್ಟ ಬಾಲವೂ ಸವನಾಗಲೊ

ಲ್ಲದು. ಆದಕಾರಣ, ಈ ಸಲ ಸುಮ್ಮನಿದ್ದು ಸಾಕ್ಷಿಯಾಗಿ ಬರಿ ನೋಡಿಕೊಂಡು ಹೋಗಬೇಕೆಂದು ನಾನು ಇಳೆಗಿಳಿದಿದ್ದೇನೆ. ನಾನು ಅಡ್ಡಗೈ ಹಾಕುವದರಿಂದಲೇ ಜಗತ್ತು ಸೊಟ್ಟಗಾಗುತ್ತಿರಬಹುದು. ಅದು ಏನೇ ಇರಲಿ. ಈ ಅವತಾರದಲ್ಲಿ ನಾನು ಏನೂ ಮಾಡತಕ್ಕವನಲ್ಲ. ತೀರ ಸಾಮಾನ್ಯ ಮನುಷ್ಯನಂತೆ ಸುಖ-ದುಃಖ ಭೋಗಿಸಿ, ವಿವೇಕ-ಅವಿವೇಕ ಮಾಡಿ ದೇಹಬಿಟ್ಟು ಹೋಗತಕ್ಕವನು. ಹೀಗಾಗಿ, ಯಾರಿಗೂ ನಾನು ಅವತಾರಿಯೆಂಬ ಮಾತೂ ಲಕ್ಷ್ಯದಲ್ಲಿ ಬರಲಾರದು. ರಾಮಾಯಣ ಬರಿಸಲಾರೆ, ಗೀತೆ ಹೇಳಲಾರೆ; ಯಾವ ತರದ ಪ್ರಕಟನೆಯೂ ಬೇಡ, ಅದೆಲ್ಲ ಭಕ್ತರು ಮಾಡಿಕೊಂಡಿದ್ದದ್ದು. ನನಗೇನು ಬೇಕಾಗಿದೆ? ಹಾಗೇ ಹೋಗಬಾರದು ಎಂದು ಸುಮ್ಮನೆ ಇದೊಂದು ಲೇಖವನ್ನು ಬರೆದಿದ್ದೇನೆ. ಸೂಕ್ಷ್ಮವಾಗಿ ವಿಚಾರಿಸಿ ನೋಡಿದರೆ ನನ್ನ ಈ ಸುಪ್ತಸ್ವಯಂಭು ಅವತಾರವು ನನ್ನ ಹಿಂದಿನ ಎಲ್ಲ ಅವತಾರಗಳಿಗಿಂತ ಮೇಲೆಂದು ತಾನೇ ಕಂಡುಬರುತ್ತದೆ ಈ ಅವತಾರದಲ್ಲಿ ನನಗಾರೂ ವಿರೋಧಿಗಳೇ ಇಲ್ಲ. ಇದ್ದರೆ ಅವರನ್ನು ನಾನು ಲೆಕ್ಕಿಸಿಲ್ಲ. ವನವಾಸವಿಲ್ಲ, ಗೋಪಿಯರ ತ್ರಾಸವಿಲ್ಲ.

ನನ್ನ ಭಕ್ತರನ್ನು ಯಾರೂ ಕಾಡುವದಿಲ್ಲ. ಇವರು ಭಕ್ತರು ಅವರು ಅಲ್ಲ ಎಂಬ ಭೇದವನ್ನೇ ನಾನು ಈ ಸಲ ಇಟ್ಟಿಲ್ಲ. ಹಿರಣ್ಯಕಶ್ಯಪು ಬರಲಿ ಪ್ರಲ್ಹಾದ ಬರಲಿ, ಇಬ್ಬರ ಜಗಳವನ್ನೂ ನಾನು ಸುಮ್ಮನೆ ನೋಡುತ್ತ ಇರುವೆನು. ಅವರ ಸೋಲು ಗೆಲವಿನ ತಾತ್ಪರ್ಯವನ್ನೂ ನಾನು ಗೀತೆ ಮಾಡಿ ಹಾಡುವದಿಲ್ಲ. ಅವರವರಿಗೆ ಏನು ಹೊಳೆಯುವದೋ ಹೊಳೆಯಲಿ. ಈ ಅವತಾರದಲ್ಲಿ ನಾನು ಎಲ್ಲರಿಗೂ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟುಬಿಟ್ಟಿದ್ದೇನೆ. ನಾನು ಮಾಡಿದ ದೊಡ್ಡ ಕೆಲಸವೇನು ಎನ್ನುವಿರಾ? ಅದೇ ತಪ್ಪು. ದೊಡ್ಡ ಕೆಲಸಮಾಡಿ ನಾನು ದೊಡ್ಡಿಸ್ತಿಕೆಯನ್ನು ಗಳಿಸಬೇಕಾಗಿಲ್ಲ. ನಾನು ಈಗಾಗಲೇ ದೊಡ್ಡವನಿದ್ದೇನೆ. ನನಗಿಂತ ದೊಡ್ಡವರಾರೂ ಇಲ್ಲ. ನಾನು ಅವತಾರಿ. ಇದಕ್ಕೂ ಹೆಚ್ಚೇನು ಬರೆಯುವದು?

ನನ್ನ ನಂಬಿದವರೋ ?— ನಾನೇನೂ ಬರೆಯದಿದ್ದರೂ ನಂಬುತ್ತಾರೆ. ನನ್ನ ನಂಬದವರೋ ?— ಎಷ್ಟು ಬರೆದರೂ ನಂಬುವದಿಲ್ಲ ಅವತಾರಿಯ ಗತಿಯೇ ಹೀಗೆ !



# ಸಾವಿನ ಕೂಡ ಸರಸ ‡ ‡ ‡ ‡

" ಮೃತ್ಯೋರ್ಮಾ ಅಮೃತಂ ಗಮಯ "

" ಉಪನಿಷತ್ "

" ಮಾತಿಗಂಜದವ ತುಂಟ, ಮರಣಕಂಜದವ ಬಂಟ "

—" ಜಾನಪದ ವೇದ "

" ಸಿಕ್ಕವರಿಗೆ ಸಿಕ್ಕುವದಿಲ್ಲ ಸಾವಿನ ಸಹವಾಸ "

—" ಸ್ವಾನುಭವ ವಚನ "

" ಸಾವು " ಎಂದ ಕೂಡಲೇ " ಸಿಂಹ – ಹುಲಿ " ಎಂಬುದಕ್ಕಿಂತಲೂ ಹೆಚ್ಚು ಜನರು ಬೆಚ್ಚಿ ಬೀಳುವರು. ಸಿಂಹ, ಹುಲಿಗಳು ಭಯದ ಉತ್ಸವ ಮೂರ್ತಿಗಳು, ಸಾವು ಮೂಲವಿಗ್ರಹ. ಕೆಲವು ಕೆಚ್ಚೆದೆಯ ವರು ಸಿಂಹ ಹುಲಿಗಳ ಬೇಟೆಯಾಡುತ್ತಾರೆ. ಕೆಲವು ಚದುರರು ಅವುಗಳ ಕೂಡ ಚಿನ್ನಾಟವಾಡುತ್ತಾರೆ. ಆದರೆ ಅಂಥವರೂ ಕೂಡ " ಸಾವು " ಎಂದರೆ ಅರೆಸತ್ತಂತಾಗುವರು. ಶೆಕ್ಸಪಿಯರನು ಏನೇ ಹೇಳಿರಲಿ, — ಎಂಥ ಹೇಡಿಗೂ ಸಾವು ಬರುವದೊಮ್ಮೆಯೆ. ಆದರೂ ಜೀವಿಗೆ ಅನೇಕ ಜನ್ಮಗಳಲ್ಲಿ, ಈ ಬೇಡಾದ ಅನುಭವ ಬಂದು, ಸಾವಿನ ಹೆದರಿಕೆಯು ಎಲ್ಲರಿಗೂ ರಕ್ತಗತ

ಎಂದುಕೊಂಡರೂ ಅಷ್ಟೇ. 'ಹುಟ್ಟಿದವನಿಗೆ ಸಾವು ತಪ್ಪಿಲ್ಲ' ಎಂದರೂ ಅಷ್ಟೇ, ಸಾವಿನ ಸೆಕೆಯೊ, ಚಳಿಯೊ ಜೀವನಿಗೆ ಹತ್ತಿದ ಕೂಡಲೇ ರಕ್ತವು ಕುದಿಯಲೋ, ತಣ್ಣಗಾಗಲೋ ಹತ್ತುವದು. ನಾವು ಹೆದರಲಿ ಧೈರ್ಯವಾಗಿರಲಿ, ಸಾವು ನಮ್ಮ ಕೈಹಿಡಿಯುವದು ಜನ್ಮದಲ್ಲೊಮ್ಮೆಯೆ. ಅದು ಎಂಥ ಹಿಡಿತ ! ಏನು ಸ್ಪರ್ಶ ! ಆ ಕ್ಷಣದಲ್ಲಿ ಎಲ್ಲವೂ ಮರೆತು ಹೋಗುವದು. "ಮೃತ್ಯುಯೋಗ" ಎಂದು ಹೇಳುವದು ಅದಕ್ಕಾಗಿಯೇ ಇಂಥ ಈ ಮೃತ್ಯು, ಸಾವು ಮರಣಗಳ ಕೂಡ "ಸರಸ" ಎಂದರೆ ಮೈಗೆ ಮುಳ್ಳುಬರುವವು. ಕೆಲವರಿಗೆ ಬೆವರು ಬಿಡಬಹುದು; ಕೆಲವರಿಗಂತೂ ನಡುಕ ಹಿಡಯು ಬಹುದು; ಮತ್ತೆ ಕೆಲವರಿಗೆ ಮೂರ್ಛೆಯೂ ಬರಬಹುದು. ಅಂಥ ಸರಸವಾಡುವ ಕೆಲಸ ನಾನು ಮಾಡಿದ್ದೇನೆ "ಎಂಥ ಗಟ್ಟಿಗ ಇವನು !" ಎಂದು ಕೂಗಬೇಡಿ ನನಗೂ ಗಟ್ಟಿಗರಿಗೂ ಅಜ ಗಜಾಂತರ

ನಾನು ಗಟ್ಟಿಗ ನಿಜ. ಆದರೆ ನನ್ನ ರೀತಿ ಬೇರೆ. ವಜ್ರ ಕಾಯರಾದ ಗಟ್ಟಿಗರು ಬಲದ ಆ ತುಫಾನ ಬಿರುಗಾಳಿಗೆ ಮರ ಗಳು ಮುರಿದುಕೊಂಡು ಬಿದ್ದಿವೆ ಹುಲ್ಲು ಹಾಗಾಗಿದೆಯೇ ? ನಾನು ವೈದ್ಯರ ಮಿಂಡನೆಂದು ಹೆಸರಾಗಿದ್ದೇನೆ. ಹುಟ್ಟಾ ಬೇನೆ ಕೊಳಕ ನಾನು. ಕತ್ತೆ ಚಿತ್ರಗಾರರ ಮಿಂಡ ಎಂದು ಹೇಳುವದಿಲ್ಲವೆ? ಚಿತ್ರಕನು ಅವರ ರೂಪರೇಷೆಯನ್ನು ನೋಡಿ ಗ್ರಹಿಸುವಷ್ಟು ಹೊತ್ತು ಅದು ಸ್ಥಿರವಾಗಿ ನಿಲ್ಲುವದಿಲ್ಲ. ನನ್ನ ದೇಹಪ್ರಕೃತಿ ಅದಕ್ಕೂ ಚಂಚಲ. ವೈದ್ಯರು ನನ್ನ ನಾಡಿ ನೋಡುವದನ್ನಂತೂ ಎಂದೋ ಬಿಟ್ಟಿದ್ದರು ಎದೆ ಹಾರುವದರ ಮೇಲಿಂದ ನನ್ನ ಆರೋಗ್ಯದ ಚಿಕಿತ್ಸೆ ಮಾಡುತ್ತಿದ್ದರು. ದಿನ ಬೆಳಗೂ ಸಾವಿಗೆ ಅಣಕಿಸಿ ಬರು ತ್ತಿದ್ದ ನನ್ನ ಎದೆಯು ಬರಬರುತ್ತ ಹಾರುವದು ಕಡಿಮೆಯಾಯಿತು. ತಾನು ಸತ್ತಿಲ್ಲವೆಂದು ಹೇಳುವ ಮಟ್ಟಿಗೆ, ಒಳಗಿಂದೊಳಗೆ ಹಾರು ತ್ತಿದ್ದಿತೇನೋ ? ಮೊದಲೇ ನನ್ನ ಕೈಬಿಟ್ಟ ವೈದ್ಯರು ನನ್ನದೆಗೂ ಕೈ ಹಚ್ಚದವರು ಪ್ರಾಣದ ಮೂಗನ್ನೇ ಹಿಡಿಯಬೇಕೆಂದೋ

ಏನೋ ನನ್ನ ಶ್ವಾಸೋಚ್ಛ್ವಾಸದಿಂದ ನನ್ನ ಚಿಕಿತ್ಸೆ ನಡೆಸಿದರು ಜೇನೆ ಕೊಳಕರಂತೆ ಮುಟ್ಟಿದರೆ ಕೆಟ್ಟೇನೆಂದು ತನ್ನಷ್ಟಕ್ಕೆ ಮೆಲ್ಲಗೆ ಉಳಿದ ಹೊತ್ತಿನಲ್ಲಿ ಸಾಗಿರುತ್ತಿದ್ದ ನನ್ನ ಉಸಿರಾಟವು ವೈದ್ಯರನ್ನು ಕಂಡು ದಂಗಬಡಿದೋ ಏನೋ, ಹಾಗೆ ನಿಂತಲ್ಲಿ ನಿಂತು ಹಾರು ತ್ತಿತ್ತು. ವೈದ್ಯರು ನಾನು ರೆಪ್ಪೆ ಬಡೆಯುವದರ ಮೇಲಿಂದ ನನ್ನ ಜೀವಕಳೆ ಕಂಡುಕೊಂಡು ಹೋಗುತ್ತಿದ್ದರು ಈ ತಪಸ್ಸನ್ನು ನಾನು ಅನೇಕ ವರ್ಷ ಸಾಗಿಸಿದೆನು. "ತೋಳ ಬಂತೆಲೇ ತೋಳ ಬಂತು!" ಎಂದು ಹೆದರಿಸಿದ ಕುರುಬರ ಹುಡುಗನಂತೆ ನಾನೆಷ್ಟೋ ಸಲ ಮರಣದ ಹುಸಿ ಹುಯಿಲೆಬ್ಬಿಸಿದ್ದೆ ಆದರಿಂದ ಬುದ್ಧಿ ಕಲಿತ ನನ್ನ ಆಪ್ತರು, ನಾನು ಒಂದೆರಡು ಸಲ ತೀರ ಸತ್ತಂತಾಗಿದ್ದರೂ, ಎದೆ ಗೆಡದೆ, ಹಬ್ಬಕ್ಕಾಗಿ ಎಂದು ನನಗೆ ಹೊಸ ಬಟ್ಟೆ ಹೊಲಿಸಿದ್ದರು. ಅವರಿಗೆ ಗೊತ್ತು ! ನೆಲಕ್ಕೆ ತಾಕಿದ ಚಂಡು [ಮೇಲಕ್ಕೇಳುವ ದೆಂದು. "ಹೊಳೆ ದಾಟಿದ ಮೇಲೆ ಅಂಬಿಗರ ಮಿಂಡ" ಎಂದು ಹೇಳು ವರು; ನಾನೆಂದೋ ಜನ್ಮದ ಹೊಳೆ ದಾಟಿದ್ದ ಆದರೆ ಜನ್ಮದ ಆಚೆಯ ದಂಡೆಯ ಮೇಲಿನವರು ನನ್ನನ್ನು ಅಸ್ಪೃಶ್ಯರಲ್ಲಿ ಎಣಿಸಿ ರಬೇಕೋ ಏನೋ ! ನನಗೆ ಎಲ್ಲ ರೋಗಗಳ "ಇಂಜಕ್ಷನ್" ಆಗಿದ್ದರಿಂದ, ನಾನು ಉಳಿದ ಜನರಂತೆ ಯಾವದಾದರೊಂದು ರೋಗ ದಿಂದ ಸತ್ತೇನೆಂಬ ಭಯವು ನನಗಿರಲಿಲ್ಲ ನಾನು ಸತ್ತರೆ ಸಾವಿ ನಿಂದ. ನಾನು ಸತ್ತರೆ ಅದರ ಶ್ರೇಯಸ್ಸೋ ಅಪಕೀರ್ತಿಯೋ ಪೂರ್ಣವಾಗಿ ಸಾವಿಗೇ.

"ತನಗೇಕೆ ಆ ಅಪರಾಧ" ವೆಂದು ಸಾವು ನನಗೆ ಅಂಜು ತ್ತಿರಬೇಕು ಎಂಬು ನನಗೆ ಬರಬರುತ್ತ ಧೈರ್ಯ ಬರತೊಡಗಿತು. ಸಾವಿನ ಬಗ್ಗೆ ಹೆದರಿಕೆ ಕಡಿಮೆಯಾಗುತ್ತಲಾಗುತ್ತ ಅದರ ಬಗ್ಗೆ ಒಂದು ಅನಾದರವುಂಟಾಗತೊಡಗಿತು. ನಿಜವಾಗಿನೋಡಿದರೆ, ಸಾವು ಎಂಥ ಪೂಜ್ಯ, ಅಪೂರ್ವ, ಪ್ರೇಕ್ಷಣೀಯ ವಸ್ತುವಾಗಬೇಕು. ವರ್ಷ ಕ್ಕೊಮ್ಮೆ ಬರುವ ಹಣ್ಣು ಏನು ರುಚಿ, ಹಬ್ಬ ಎಷ್ಟು ಪ್ರಿಯ !

ಎಂದಾದರೂ ಬರುವ ಗ್ರಹಣ ಧೂಮಕೇತುಗಳು ಎಷ್ಟು ಪ್ರೇಕ್ಷಣೀಯ! ನೂರುವರ್ಷಕ್ಕೊಮ್ಮೆ ಬಂದ ಸಾವು ಇಷ್ಟು ಅನಾದರಣೀಯವಾಗಬೇಕೆ ? ಇದರ ಮೋರೆಯನ್ನೇಕೆ ಜನರು ತಪ್ಪಿಸುವರೋ ? ನನ್ನ ರೀತಿಯೇನೋ ಬೇರೆಯಾಗಿತ್ತೆನ್ನಿ. ನನಗೆ ಸಾವಿನ ಬೆಟ್ಟಿಯೆಂದರೆ ಸರ್ಕಸಿನೊಳಗಿನ ಕುರಿಗೆ ದಿನ ರಾತ್ರಿಯೂ ಆಗುವ ಹುಲಿಯ ಬೆಟ್ಟಿಯಂತೆ. ಆ ಹುಲಿ ಕುರಿಗಳು ಒಂದೇ ತಳಿಗೆಯಲ್ಲಿ ಹಾಲು ಕುಡಿಯುವಂತೆ, ನಾನು ಸಾವಿನ ಕೂಡ ಒಂದೇ ಬಟ್ಟಲಲ್ಲಿ ದಿನಾಲು ಕಷಾಯ ಕುಡಿಯುತ್ತಿದ್ದೆ. ಸಾವಿಗೂ ಬೆಚ್ಚದ ನಾನು ಒಮ್ಮೊಮ್ಮೆ ಆ ಕಷಾಯದಲ್ಲಿ ಬಿದ್ದ ನನ್ನ ಮೋರೆಯ ನೆರಳನ್ನೇ ಕಂಡು ಬೆಚ್ಚಿ ಬೀಳುತ್ತಿದ್ದೆ ಅದನ್ನೇ ಕಂಡು ನನ್ನ ವೈದ್ಯರಿಗೆ ಸಂತೋಷ 'ಇಷ್ಟು ಜೀವವಿದೆಯಲ್ಲ ಇವನಲ್ಲಿ' ಎಂದು, ಇದೇನು ಸರಸವೋ ನಾವು ಬೇರೆ ಕಾಣೆವು ಎಂದು ಜುಗುಪ್ಸೆ ಪಡಬೇಡಿ. ಇದು ನನ್ನ ಗರಡಿಸಾಧಕ ಮಾತ್ರ ಚಮತ್ಕಾರವೆಲ್ಲ ಮುಂದಿದೆ. ಹತ್ತು ಜನ ಕಳ್ಳರನ್ನೋಡಿಸಿದ ಒಬ್ಬ ಕಳ್ಳನ ಮಾತನ್ನು ಕೇಳಿಲ್ಲವೇ ನೀವು? ಅವನು ಮುಂದೆ ಓಡುತ್ತಿದ್ದನಂತೆ, ಕಳ್ಳರು ಅವನನ್ನು ಹಿಡಿಯಲು ಹಿಂದೆ ಓಡುತ್ತಿದ್ದರಂತೆ, ಹೀಗೆ ಇದುವರೆಗಿನ ನನ್ನ ಸರಸ. ನಾನು ಮುಂದು ಮುಂದೆ ಓಡುತ್ತಿದ್ದೆ ಸಾವು ನನ್ನ ಹಿಂದಿನಿಂದ ಓಡುತ್ತಿತ್ತು. ಅಂತೂ ಸಾವನ್ನು ನಾನು ಓಡಾಡಿಸಿದ್ದೇನೆ ಆದರೆ ಬೇನೆಕೊಳಕನ ಜೀವನವು ಏನು ಸತ್ಯ? ರೋಗದಿಂದಾಗಲಿ ಔಷದದಿಂದಾಗಲಿ ಯಾವ ಹೆದರಿಕೆಯೂ ನನಗೆ ಇಲ್ಲದಾಗಿತ್ತು. ನನ್ನ ಜೀವನದಿಂದಾಗಲಿ ಮರಣದಿಂದಾಗಲಿ ಯಾವ ಹೆದರಿಕೆಯೂ ನನ್ನ ಆಪ್ತರಿಗೆ ಇಲ್ಲದಾಗಿತ್ತು ನನ್ನ ಮರಣದ ಭಯ ಅವರಿಗಿರಲಿಲ್ಲ, ನನಗೂ ಇರಲಿಲ್ಲ ನನ್ನ ಜೀವನವನ್ನು ಅವರು ಲೆಕ್ಕದಲ್ಲಿ ಹಿಡಿದಿರಲಿಲ್ಲ. ನನಗೂ ಅದರ ಲೆಕ್ಕ ಹತ್ತುತ್ತಿರಲಿಲ್ಲ. ನನಗೆ ಇಂಥ ಜೀವನದ ಬೇಸರ ಬಂದಿತು. ನಾನು ಹೀಗೇ ಅಮರನಾಗಿಬಿಟ್ಟರೆ ಹೇಗೆ ? ಎಂಬ ವಿಚಾರ ಹೊಳೆದು ನೈ ನಡುಗಿತು. ಸಾವು ನನ್ನನ್ನು ತೀರಾ ಮರೆತುಬಿಟ್ಟಿರಬಹುದೇ ? ಎಂದು ಚಿಂತೆಯುಂಟಾಯಿತು.

ವೈದ್ಯರು ನನ್ನ ಕೈಬಿಟ್ಟರು, ರೋಗ ಕೈ ಬಿಟ್ಟಿತು; ನಾವು ಕೈಬಿಟ್ಟಿತು ಹಾಗಾದರೆ ಈ ಜೀವನ್ಮರಣವೊಳಗಿಂದ ಕೈಗೊಟ್ಟು ನನ್ನನ್ನು ಬಿಡಿಸುವವರಾರು ?

ಬಹಳ ಚಿಂತೆಗಿಟ್ಟಿತು ತಲೆ ತುರಿಸಿದೆ, ಮೈ ಕೈ ತುರಿಸಿಕೊಂಡೆ, ಎಲ್ಲಿಯೂ ವಿಚಾರವು ತಲದೋರಲೊಲ್ಲದು. ಜೀಸತ್ತು ಹಾಗೆ ಗಾದೆಯ ಮೇಲೆ ಬಿದ್ದುಕೊಂಡೆ ಅಯ್ಯೋ ಜೀನತ್ತೆ .. ಸರಿ, ಒಂದು ವಿಚಾರ ಹೊಳೆಯಿತು — ನತ್ತ ಹೊರತು ನಾಯಲು ಬೇರೆ ಉಪಾಯವಿಲ್ಲ ಎಂದು ! ಎಂಥ ಬಂಗಾರದಂಥ ಮಾತು ! ಎಷ್ಟು ಉಜ್ವಲವಾದ ವಿಚಾರ ! ತಾನು ನಾಯದೇ ಸ್ವರ್ಗವಿಲ್ಲ. ನಾವು ನಮ್ಮನ್ನು ಕೊಂದರೆ ಎಲ್ಲಿಯ ಸ್ವರ್ಗ ? ನಾವಿನ ಮೆಟ್ಟು ಮೇಲೆ ನಾವು ಏರೇರಿ ಹೋಗಬೇಕು, ಅದರ - ನಮ್ಮ ಮಲ್ಲಯುದ್ಧವಾಗ ಬೇಕು. ಪಟ್ಟಿಗೆ ಪಟ್ಟು, ಹಿಡಿತಕ್ಕೆ ಹಿಡಿತ ಆಗಿ ನಾವೂ ನಾಯಬೇಕು ಸತ್ತು ಅಮರರಾಗಬೇಕು, ಮತ್ತೆ ನಾಯದವರಾಗಬೇಕು ಅದೇ ವೀರಮರಣ ! ಆದರೆ ರೂಢಿಯ ವೀರಮರಣದ ಕಲ್ಪನ ನನಗೆ ಸಂಬರುವದಿಲ್ಲ ಮೊದಲನೆಯ ಮಾತೆಂದರೆ, ಮೊದಲಿನಿಂದ ಕೊನೆಯ ವರಗೂ ಅದೆಲ್ಲ ಹಿಂಸಾಮಾರ್ಗ ಎರಡನೆಯ ಮಾತೆಂದರೆ, ಎರಡನೆಯವರ ಕೈಯಿಂದ ನಾವು ರಣದಲ್ಲ ಸಾಯುವೆವು ಗುದ್ದಿದರೆ ನಾಯುವ ನಾನು ಹಿಂಸಾಮಾರ್ಗದ ಜಾತಿವೈರಿಯಾಗಿದ್ದ, ಎನ್ನಿ ಮತ್ತು ಕೈಯಲ್ಲಿರುವ ಮರಣವನ್ನು ಎರಡನೆಯವರಿಂದ ಸ್ವೀಕರಿಸುವದು ನನಗೆ ನಮ್ಮತವಿರಲಿಲ್ಲ. ಸಾಯುವಂಥ ಕೆಲಸದಲ್ಲಿಯೂ ಪರರನ್ನು ಅವಲಂಬಿಸುವದೇಕೆ ? ನಮ್ಮ ಪರಾವಲಂಬಿತ್ವಕ್ಕೆ ಇದಕ್ಕೂ ಹೀನ ಉದಾಹರಣೆ ಇದಯೇ ? - ಅಷ್ಟರಲ್ಲಿಯೇ 'ಪೌರುಷ ಪ್ರಯತ್ನಕ್ಕೆ ದೈವವು ಕೈ ಗೊಡುವದು ' ಎಂಬ ಗಾದಯ ಮಾತು ನೆನಪಿಗೆ ಬಂತು ನಾನು ಸ್ವತಂತ್ರ ಪ್ರಯತ್ನದಿಂದ ಸಾಯುವ ಮಾರ್ಗ ಹಿಡಿದೆ ಆ ಪ್ರಯೋಗಗಳ ಇತ್ಯರ್ಥವನ್ನು ಇಲ್ಲಿ ಕೊಟ್ಟಿದ್ದೇನೆ —

ಸಾಯಬೇಕೆಂದು ಪ್ರಯತ್ನಮಾಡುವ ವರೆಗೂ ಸಾವು ತಮ್ಮ

ಇಚ್ಛೆಯುದಲ್ಲಿ—ಎಂಬ ಮಾತು ಅಷ್ಟು ನಿಚ್ಚಳವಾಗಿ ಕಾಣುವದಿಲ್ಲ. ಸುಲಭವಾಗಿ ಅಂದು ಬಿಡುತ್ತೇನೆ—"ನನಗೆ ಜೀವ ಬೇಡಾದರೆ ಸತ್ತು ಬಿಡುತ್ತೇನೆ" ಎಂದು ಅನ್ನುವದು ಎಷ್ಟು ಸುಲಭ! ಮರಣವು ಇಷ್ಟು ಸುಲಭವಿದ್ದರೆ ಬಹುಬಗ್ಗರು ಕೇಳಯುತ್ತಿರಲಿಲ್ಲ ಮತ್ತು ಇಚ್ಛಾಮರಣವೆಂಬುದು ಎಂದು ದೊಡ್ಡ ಸಿದ್ಧಿಯೆಂದೂ ಎನಿಸಿಕೊಳ್ಳುತ್ತಿರಲಿಲ್ಲ ಬೇನೆಕೋಳಿಕತನವು 'ಸಾವಿನ ಬಾಯಲ್ಲಿ ಸಿಕ್ಕು ತುತ್ತಲ್ಲ ಜೀವನವು" ಎಂಬು ಕಲಿಸಿತು, ನಾವೂ ಜೀವನದ ಬಾಯಿಗೆ ಸಿಕ್ಕ ತುತ್ತಲ್ಲ ಎಂಬುದನ್ನು ನನ್ನ ಆತ್ಮಹತ್ಯದ ಪ್ರಯೋಗಗಳು ಕಲಿಸಿದವು

ನನ್ನ ಜೀವನದಲ್ಲಿ ಮುಂದೆ ಎಂದೂ ತೋರದ ಗಾಂಭೀರ್ಯವು ಈಗ ತಲೆದೋರಿತು ನಾ ವಿಚಾರ ಮಾಡತೊಡಗಿದೆ, ಸುಲಭವಾಗಿ ಸಾಯುವದು ಹೇಗೆ, ಎಂದು ಉಸಿರೇ ಪ್ರಾಣ, ಈ ಉಸಿರಾಟವನ್ನೇ ನಿಲ್ಲಿಸಿದರ ಜೀವನದ ಆಗದಾಟವೇ ನಿಲ್ಲುವದು ನನ್ನ ಕಾರ್ಯಪ್ರವೃತ್ತಿಯನ್ನು ಕಾದುಕೊಂಡಂತೆ- ನನಗೆ ವಿಚಾರ ಹೊಳೆಯುವದರೊಂದೇ ತಡ-ನಾನು ಪ್ರಯೋಗವನ್ನೇ ಪ್ರಾರಂಭಿಸಿದೆ. ಇಲ್ಲಿ ಒಂದೆರಡು ಮಾತುಗಳನ್ನು ಹೇಳುವದು ಅತ್ಯಗತ್ಯ ಒಂದು, ಈ ನನ್ನ ಆತ್ಮಹತ್ಯೆಯ ಉದ್ದೇಶವನ್ನು ನಾನು ಯಾರಿಗೂ ತಿಳಿಸಿರಲಿಲ್ಲ ಇಷ್ಟೇ ಅಲ್ಲ, ಅದು ತಿಳಿಯಬಾರದೆಂದೇ ನಾನು ನನ್ನ ಊಟ-ಉಡಿಗೆ-ನಿದ್ರೆ ಮೊದಲಾದವುಗಳನ್ನು ಹೆಚ್ಚು ನಿಯಮಿತವಾಗಿ ಮಾಡತೊಡಗಿದೆ ಎರಡನೆಯ ಮಾತು, ನನಗೆ ಜಂಭವಿರಲಿಲ್ಲ ತೋರಿಕೆಗಾಗಿ ಏನು ಮಾಡುವದಕ್ಕೂ ಹೇಸಿಗೆ, ನನಗೆ ಮೂರನೆಯ ಮಾತು ಸ್ವಯಂ ಮರಣಪ್ರಯೋಗಗಳು ನನ್ನ ಆತ್ಮಸಂತೋಷದಿಂದಲೂ "ಅಕ್ಕಲ ಹುಷಾರಿ" ಯಿಂದಲೂ ನಾಗಿದ್ದುವು ಈ ಮಾತುಗಳನ್ನು ನೆನಪಿಟ್ಟರೆ ನನ್ನ ಮುಂದಿನ ಮಾತುಗಳ ಸಂಶಯ ಯಾರಿಗೂ ಬರಲಿಕ್ಕಿಲ್ಲ

ಹೇಳಿದ್ದೇನಷ್ಟೇ, ಉಸಿರು ನಿಲ್ಲಿಸಿ ಪ್ರಾಣತ್ಯಾಗ ಮಾಡಬೇಕೆಂದು ನಾನು ಮಾಡಿದ ನಿರ್ಧಾರವನ್ನು? ನಾನು ಪ್ರಾರಂಭ

ಮಾಡಿದ್ದು ಹೀಗೆ – ಮೊದಲು ಒಳಗೆ ಬಂದ ಉಸಿರನ್ನು ಒಳಗೇ ಎಳೆದಿಡಲು ಹವಣಿಸಿದೆ. ಅಶಕ್ತತೆಯ ಮೂಲಕ ಅದು ಸಾಧ್ಯವಾಗ ಲೊಲ್ಲದು ಉಸಿರು ಬಿಟ್ಟೆ, ಹಾಗೆಯೇ ಬಿಟ್ಟೇ ಬಿಟ್ಟೆ; ದೇಹದ ತಟ್ಟೆಯ ಮನೆಯು ಹಾಳಾಗುವವರೆಗೆ ಹಾಗೆಯೆ ಬಿಡಬೇಕೆಂದೆ. ಉಸಿರು ಬಿಡುವದಾದರೂ ಎಷ್ಟು ದೂರ ? ಮತ್ತೆ ಹಾಗೆಯೆ ಎಳೆದು ಒಳಕ್ಕೆ ಹೊಕ್ಕಳಕ್ಕೆ ಮುಟ್ಟಿಸಿದೆ ' ಗುಬ್ಬೀ ಗುಬ್ಬಿ ಸತ್ತೆಯಾ ? ' ಎಂದರೆ ' ನಾನೇಕೆ ಸಾಯಲಿ ಹುಚ್ಚು ಹಾರುವಾ ! ಜೋಕಾಲಿ ಆಡುತ್ತಿದ್ದೇನೆ ' ಎಂದು ಹೇಳಿದಂತೆ ನನ್ನ ಜೀವವೂ ಹೇಳಿತು ನಾನೂ ಎದೆಗುಂದಲಿಲ್ಲ. ಈ ಉಸಿರಾಟದಿಂದ ಪ್ರಾಣವನ್ನು ಎಳೆ ದಾಡಿ ಎಳೆದಾಡಿ, ಹಾಗೆಯೇ ಮುಸುಕಾಡದಂತೆ ಇಂದಿಲ್ಲ ನಾಳೆ ಮಾಡಬಹುದೆಂಬ ಭರವಸೆಯಿಂದ ನಾನೆಷ್ಟೋ ದಿವಸ ಈ ಪ್ರಯತ ಸಾಗಿಸಿದೆ ರೀತಿಯಲ್ಲಿ ಏನಾದರೂ ತಪ್ಪಿರಬಹುದೇನೋ, ಎಂದು ಉಸಿರಾಟದ ರೀತಿಯನ್ನು ತಿರುವು ಮುರುವು ಮಾಡಿದೆ. ಒಳಗಿಂದ ಉಸಿರನ್ನು ಹೊರಗೆ ದೂಡಿ ಮೂಡಿ, ಕೊನೆಗೆ ಹೊರಗಿನದನ್ನು ಒಳಗೆ ನೂಕಿ ನೂಕಿ, ಆಮೇಲೆ ಕೆಲವು ಹೊತ್ತು ಆ ಉಸಿರು ಕಟ್ಟಿಹಾಕಿ ನೋಡಿದೆ ಈ ಜಗ್ಗಾಟಕ್ಕೆ ಬೇಸತ್ತು ಪ್ರಾಣವು ದೇಹವನ್ನು ಬಿಡ ಬಹುದೆಂಬ ಭರವಸೆ ನನಗಿತ್ತು ಮೊದಲೇ ನನಗೆ ಸಾವಿನ ಭಯ ವಿರಲಿಲ್ಲ. ಅದರಲ್ಲಿ ಬೇರೆ ಈಗ ಅದರ ಮೈಮೇಲೆ ಸಾಗಿಹೋಗು ತ್ತಿದ್ದೆ ಈ ನಿರ್ಭಯದಿಂದಲೋ ಏನೋ, ನನ್ನ ದೇಹಪ್ರಕೃತಿಯು ಸುಧಾರಿಸತೊಡಗಿತು. ನನ್ನ ರೋಗದ ಕಳೆ ಕಡಿಮೆಯಾಯಿತು. ಒಮ್ಮೆ ನಾನು ಸಹಜವಾಗಿ ಕೆಲವು ಪುಸ್ತಕಗಳನ್ನು ನೋಡುತ್ತಿರು ವಾಗ " ಪ್ರಾಣಾಯಾಮ "ದ ವಿಷಯ ಬಂದಿತು. ನನಗೆ ಆಶ್ಚರ್ಯ ವಾಯಿತು, ಭಯವಾಯಿತು ಆಗ ನನ್ನ ತಪ್ಪು ನನಗೆ ತಿಳಿಯಿತು. ನಾನು ದಿನಾಲು ಮಾಡುತ್ತಿದ್ದುದು ಆತ್ಮಹತ್ಯೆಯ ಪ್ರಯತ್ನವಲ್ಲ, ಆಯುರ್ವೃದ್ಧಿಯ ಪ್ರಯತ್ನ ಎಂದು. ನನ್ನ ತಪ್ಪಾದ ಉಪಾಯ ಯೋಜನೆಗಾಗಿ ಪಾಶ್ಚಾತ್ತಾಪ ಪಟ್ಟೆ. ಆದರೆ ನಿಶ್ಚಯವನ್ನು ಬಿಡಲಿಲ್ಲ

ಸಾಯುವ ಕೆಲಸದಲ್ಲಿ ಈ ಹೊಯ್ದಾಡುವ ಗಾಳಿಯನ್ನು ನಂಬದೆ, ಹೆಚ್ಚು ಮನಗಂಡ ಗಟ್ಟಿ ಉಪಾಯವನ್ನು ಯೋಚಿಸಿದೆ ಉರುಲು ಹಾಕಿ ಕೊಳ್ಳುವದಕ್ಕಿಂತ ಹೆಚ್ಚು ಸುಲಭವಾದ, ತೀರ ಕೈಯೊಳಗಿನ ಉಪಾಯವು ಬೇರೆ ಯಾವುದು ? ಸರಿ ! ಅಂದೇ ರಾತ್ರಿ ಉರುಲು ಹಾಕಿಕೊಳ್ಳುವ ನಿಶ್ಚಯ ಮಾಡಿದೆ. ಬೆಳಗು ಮುಂಜಾವು ಮೂರು–ನಾಲ್ಕು ಗಂಟೆಯ ಸಮಯಕ್ಕೆ, ಆ ಕೆಲಸ ಮಾಡುವದೆಂದು ಗೊತ್ತು ಮಾಡಿಕೊಂಡು ಮಲಗಿದೆ ಅಂದು ಹತ್ತಿದ ನಿದ್ರೆ ಎಂಥ ನಿದ್ರೆಯದು ! ಅದು ಹಾಗೇ ಮುಗಿಯದೆ ಸಾಗಿದ್ದರೆ ನನ್ನ ಕೆಲಸ ಮುಗಿದೇ ಬಿಡುತ್ತಿತ್ತು ಆದರೇನು ? ಬೆಳಗುಮುಂಜಾವು ನನಗೆ ಆರು ಗಂಟೆಗೆ ಎಚ್ಚರನಾಯಿತು. ಎಚ್ಚರಾದಮೇಲೆ ಕೆಲಹೊತ್ತಿನವರೆಗೆ ನನಗೆ ಮರಣದ ವಿಚಾರವೇ ಹೊಳೆಯಲಿಲ್ಲ. ಉದಯರಾಗಗಳನ್ನು ಹೇಳತೊಡಗಿದೆ ಮನಸ್ಸು ಅಷ್ಟು " ಝೋಕಾಗಿತ್ತು. ಹೇಳುತ್ತಾ ಹೇಳುತ್ತಾ " ಕರುಣಿಸೋ ಕೃಷ್ಣಾ ಕರುಣಿಸೋ "ಬಂತು. ಬಂತು—ಮರಣದ ನೆನಪು ಎಷ್ಟು ಮರಗೂಳಿ ನಾನು ! . ಎಂದುಕೊಂಡೆ ಮಾರನೆಯ ದಿನ ಗಲ್ಲಿಗೆ ಹಾಕುವ ಮನುಷ್ಯನ ಇಚ್ಛಾಪೂರ್ತಿಯನ್ನು ಮಾಡುವಂತೆ, ನಾನು ಅಂದು ಸ್ವೇಚ್ಛೆಯಾಗಿ ಆನಂದವಾಗಿ ಕಾಲ ಕಳೆದೆ ಮೂರು ಗಂಟೆಗೆ ಎಚ್ಚರಾಗುವಂತೆ 'ಅಲಾರ್ಮ್' ಇಟ್ಟೆ ನಿಶ್ಚಿಂತನ ನಿದ್ರೆಯ ಮುಂದೆ ಬಿಪರು-ಗಂಟೆಯೇ ? ನನಗೆ " ಅಲಾರ್ಮ್ " ನಿಂದ ಚಿಕ್ಕಾಡು ಕಡಿದಷ್ಟೂ ತೊಂದರೆಯಾಗಲಿಲ್ಲ ಇನ್ನೊಂದು ವಿಚಾರ ಹೊಳೆಯಿತು. ಮಲಗುವ ಪೂರ್ವದಲ್ಲಿ ಭೇದಿಗೆ ತಕ್ಕೊಳ್ಳಬೇಕು, ಅಂದರೆ ಎಚ್ಚರಾದೀತೆಂದು ಭೇದಿಗೆ ತಕ್ಕೊಳ್ಳುವದರಿಂದ ಇಚ್ಛೆಯಂತೆ ನಾಲ್ಕು ಗಂಟೆಗೆ ಎಚ್ಚರವೇನೋ ಆಯಿತು. ಆದರೆ ಭೇದಿಯ ಬಾಧೆಯನ್ನು ತೀರಿಸುವದರಲ್ಲಿ ಬೆಳಗಾಯಿತು. ಕೊನೆಗೆ ಈ ಹೊರಗಿನ ಉಪಾಯಗಳ ಬಗ್ಗೆ ವಿಶ್ವಾಸವು ಹಾರಿ, ನಾಲ್ಕಕ್ಕೆ ಏಳತಕ್ಕದ್ದು ಎಂದು ಮನಸ್ಸಿನಲ್ಲಿ ಸಂಕಲ್ಪ ಮಾಡಿದೆ. ಸಂಕಲ್ಪಬಲದ ಮುಂದೆ ಬೇರೆ ಬಲವೇ ? ಸಂಕಲ್ಪಕ್ಕೆ ಸರಿಯಾಗಿ ನಾನು ನಾಲ್ಕು ಗಂಟೆಗೆ ತಟ್ಟನೆ ಎದ್ದೆ. ಮಾಡಿದೆ, ಉರುಲುಹಾಕಿ

ಕೊಳ್ಳುವವರ ಸಿದ್ಧತೆ! ಸಿದ್ಧತೆ ಏನು? ಕೌಪೀನ, ಉರುಲು, ಸಾಯುವವರು, ಈ ಮೂರು ಇದ್ದರೆ ತೀರಿತು. ಆ ಮೂರೂ ಇದ್ದವು ಸಾಯುವ ಮುಂಚೆ ದೇವರ ಪ್ರಾರ್ಥನೆ ಮಾಡಬೇಕೆಂಬ ಸುವಿಚಾರ ಬಂದಿತ. ಪ್ರಾರ್ಥನೆಗೆ ಕುಳಿತೆ ಕಣ್ಣು ಮುಚ್ಚಿ ಧ್ಯಾನಕ್ಕೆ ಪ್ರಾರಂಭ ವಾಯಿತು. ಪ್ರಾರಂಭ ಪ್ರಾರಂಭದಲ್ಲಿ ಪ್ರಾರ್ಥನೆಯು ಧ್ಯಾನನಿತ್ಯ ಆದರ ಮುಂದೆ ನೂರಾರು ಬೇಗುಚಾಂದ ನಕ್ಷತ್ರ ಜೊಂಪು ಯಥಾ ಪ್ರಕಾರ ಮುಂಜಾನೆ ಎಚ್ಚರ. ಹೀಗೆ ಕೆಲವು ದಿವಸ ನಡೆಯಿತು ನಾನು ದೇವರ ಪ್ರಾರ್ಥನೆಯನ್ನು ಮಾಡಬಾರದೆಂದು ಗೊತ್ತು ಮಾಡಿದೆ. ಯಾಕೆಂದರೆ ಪ್ರಾರ್ಥನ ಮಾಡಲು ಹೋಗಿ ನಿದ್ದೆ ಹತ್ತಿ ಬಿಡುತ್ತಿತ್ತು. ಇದೂ ಅಲ್ಲದೆ ಮರಣಾಂತರ್ಯಾಮಿಯಾದ ಅವನಿಗೆ ಗೊತ್ತಿಲ್ಲದ್ದೇನು? ಹಾಗೆ ಈ ನಾಲ್ಕಾರು ದಿನ ಎಚ್ಚರದ ಕೂಡಲೆ ಹಾಸಿಗೆಯನ್ನು ಸುತ್ತಿಟ್ಟು ಶಾಸ್ತ್ರಕ್ಕಾಗಿ ದೇವರ ಪ್ರಾರ್ಥನೆಯನ್ನು ಒಂದು ನಿಮಿಷದಲ್ಲ ಮುಗಿಸಿದೆ. ಮೈಮೇಲಿನ ಬಟ್ಟೆಗಳನ್ನೆಲ್ಲ ಸುತ್ತಿ ಒಂದು ಹಗ್ಗದಿಂದ ಕಟ್ಟಿ ಗೂಟಕ್ಕೆ ತೂಗುಹಾಕಿದೆ. ಸಾಯುವ ಹೊತ್ತಿನಲ್ಲಿ ಮೈಮೇಲ ಬಟ್ಟೆಬರೆಗಳೇಕೆ, ಎಂದು ಒಂದು ಹಳೆಯ ಕೌಪೀನವನ್ನು ಹಾಕಿಕೊಂಡೆ. ಎಲ್ಲ ಸಿದ್ಧತೆಯಾಯಿತು. ಆದರೇನು? ಎಲ್ಲಿ ನೋಡಿದರೂ ಉರುಲಿನ ಹಗ್ಗವೇ ದೊರೆಯುವುದಿಲ್ಲವು. ಹೊರಗೆ ಹೋಗಿ ತರಬೇಕೆಂದರೆ ದಿಗಂಬರ ವೇಷ! ಕೌಪೀನದಿಂದ ಉರುಲು ಹಾಕಿಕೊಳ್ಳಲೇ, ಎನಿಸಿತು. ಆದರೆ ಆ ಕೊಳಕು ಅರಿವೆಯುಲ್ಲಿ ನನ್ನ ಪುಷ್ಟನಾದ ಕೊರಳಿಗೆ ಉರುಲು ಹಾಕುವ ಗಟ್ಟಿಗತನವಿರಲಿಲ್ಲ. ಆ ಹಗ್ಗವನ್ನು ಹುಡುಕಿದ್ದೇ ಹುಡುಕಿದೆ. ಬೆಳಗಾಗುವ ಸಮಯಕ್ಕೆ ಕಂಡುಬಂತು, ಆ ಹಗ್ಗದಿಂದಲೇ ನನ್ನ ಬಟ್ಟೆಬರೆಗಳನ್ನು ಕಟ್ಟಿ ಇಟ್ಟಿದ್ದೆ ಎಂಬುದು. ಉರುಲು ಹಾಕಿಕೊಂಡು ಸಾಯುವುದು ನನ್ನ ಹಣೆಯಲ್ಲಿಲ್ಲ ಎಂದು ತೋರಿದ್ದರಿಂದ ನಾನು ಆ ಹಾದಿಯನ್ನೇ ಬಿಟ್ಟು ಬಿಟ್ಟೆ.

ಗುಂಡು ಹಾಕಿಕೊಳ್ಳುವ ವಿಚಾರ ಬಂತು. ಒಬ್ಬ ಗೆಳೆಯನ ಕಡೆಗೆ ದಿನಾಲು ಹೋಗಿ, ಗುರಿಹೊಡೆಯುವುದನ್ನು ಕಲಿತೆ. ಆದರೆ

ಅದರ ಉಪಯೋಗವನ್ನು ಸ್ವಂತ ಮಾಡಿಕೊಳ್ಳಬೇಕು, ಎಂದು ಮನಸ್ಸಿನಲ್ಲಿ ಬಂದಾಗ ಜೀವ ಜರಿದುಕೊಂಡಿತು. ಸಾಯಲು ಒಪ್ಪಿದರೆ ಜೀವವನ್ನು ಕಾಡುಮೃಗದ ಬೇಟೆಯಾಡುವಂತೆ ಬೇಟೆಯಾಡುವದು ತರವಲ್ಲವೆಂದು ನನ್ನ ಸಾತ್ವಿಕ ಜೀವನಕ್ಕೆ ಸಿಸಿದ್ದರೆ ಸೋಜಿಗವೇನು ? ಸರಿ, ಗುಂಡಿನ ಗುರಿ ತಪ್ಪಿತು. ವಿಷಕ್ಕೆ ಕೈ ಹಾಕದೆ, ಬೇರೆ ಗತಿಯೇನು ಇನ್ನು ? ವಜ್ರವನ್ನು ಅರೆದು ಕುಡಿಯಲಾ ? ಛೀ ! ಬಡಜೀವವನ್ನು ಕೊಲ್ಲಲು ಇಷ್ಟು ಬೆಲೆಯುಳ್ಳ ಉಪಾಯವೇಕೆ ? ಅಫು ನುಂಗಲಾ ? ಸಾಯುವ ಪೂರ್ವದಲ್ಲಿ ಅಮಲೇರಿ ಎಚ್ಚರ ತಪ್ಪಿ ಸಾಯುವದು ನನಗೆ ಸರಿದೋರಲಿಲ್ಲ. ಕಣ್ತೆರೆದು ನಾನು ಎಚ್ಚರದಿಂದ ಸಾಯಬೇಕು, ಎಂದು ನನ್ನ ಸಂಕಲ್ಪ. ಸೋಮಲ – ಗೀಮಲ ? ಬರುಬರುತ್ತ ನನಗೆ ವಿಷಪ್ರಯೋಗವು ಸರಿಯಲ್ಲ ಎಂದು ತೋರಿತು. ಇನ್ನೊಂದು: ನಾನು ಚೆನ್ನಾಗಿ ಆರೋಗ್ಯವಂತನಾಗಿದ್ದೆ. ಇಂಥ ಆರೋಗ್ಯಸಂಪನ್ನ ಒಮ್ಮೆಲೆ ಸತ್ತರೆ ವಿಷಪ್ರಯೋಗವಾಗಿರಬೇಕೆಂದು ತಾನೇ ಅನುಮಾನ ಕಟ್ಟುವರು ಜನರು? ಮುಂದಿನ ಅನುಮಾನವೇನಂದರೆ ಬೇರೆಯವರು ವಿಷ ಹಾಕಿರಬೇಕೆಂದು. ಇದೇ ನನಗೆ ಬೇಡವಾದದ್ದು. ನನ್ನ ಸಾವಿನಿಂದ ಯಾರೂ ತೊಂದರೆಗೀಡಾಗಬಾರದೆಂದು. ನನ್ನ ಆಶೆ. ಈ ಆಶೆಗಾಗಿ, ಆ ವಿಷಕ್ಕೂ ಮೊಳ ಹೇಗ ಒಳಬೇಕು ? ಸರಿ, ವಿಷದ ಕೈ ಬಿಟ್ಟು ಇನ್ನು ಕೆರೆ-ಬಾವಿಯ ಪಾಲಾಗುವದೇ ನನಗೆ ಉಪಾಯ. ಕೆರೆಯ ವಿಚಾರವನ್ನು ಮೊದಲೇ ಹೊಡೆದು ಹಾಕಿದೆ. ಜನಕ್ಕೂ ದನಕ್ಕೂ ಉಪಯೋಗವಾಗುವ ನೀರು ಕೆಡಿಸುವದು ಉಚಿತವಾಗಿ ತೋರಲಿಲ್ಲ. ಇನ್ನು ಭಾವಿಗಳು. ಸಿಹಿ ನೀರಿನ ಭಾವಿಗಳಲ್ಲಿಯಂತೂ ನಾನು ಹಾರಕೊಳ್ಳಲಾರೆ. ಯಾವ ನೀರು ಕುಡಿದು ನಾನು ಬದುಕಿದೆನೋ ಅದರಲ್ಲಿಯೇ ನನ್ನ ಪ್ರಾಣ ಹೋಯಿತೆಂಬ ಅಪಕೀರ್ತಿ ಅದಕ್ಕೇಕೆ ? ನಾನು ಕುದುರೆ ಸವಾರಿ ಮಾಡಿ ಊರ ಸುತ್ತುಮುತ್ತಲಿನ ಎಲ್ಲ ಭಾವಿಗಳ ಪರೀಕ್ಷಣ ಮಾಡಿದೆ. ಯಾಕೆಂದರೆ ಸವಳು ನೀರಿನ ಭಾವಿಗಳಾದರೇನು ! ಊರೊಳಗಿನವೆಲ್ಲ ಬಡಬಗ್ಗರಿಗೆ ಉಪಯೋಗ

ಅಂತೆಯೇ ನಾನು ಹೊರಗಿನ ಭಾವಿಗಳನ್ನು ಹಣಿಕಿ ಹಾಕಿದ್ದು ಕೆಲವುಗಳಲ್ಲಿ ನೀರೆ ಇರಲಿಲ್ಲ ಅವು ನನ್ನ ಕೆಲಸಕ್ಕೆ ಬಾರದವುಗಳು ನೀರಿದ್ದುವುಗಳೋ ಬಳಿಕೆಯಿಲ್ಲದ್ದರಿಂದ ನಾರುತ್ತಿದ್ದವು. ಅಂಥ ವನ್ನು ಹಾರಿ ನೀರು ಕುಡಿಯಲಾರದೆ – ಮುಳುಗಲಾರದೆ – ತೊಳ ಲಾಡುವದು ಏಕೆ? ನನಗೆ ಬೇರೆ ಈಸಲು ಬರುತ್ತಿತ್ತು. ಆ ಭಾವಿ ಗಳೂ ನನಗೆ ಸರಿಬೀಳಲಿಲ್ಲ. ಆಯಿತು ನಾನು ಕೈ ಊರಿದೆ

ಹೀಗೆಯೆ ಕೆಲವು ದಿವಸ ನಡೆದಾಗ ನನಗೆ ಒಂದು ವಿಚಾರ ಬಂತು, ನಾನು ಇಷ್ಟು ಆರೋಗ್ಯವಂತನಾಗಿರುವ ಸಾಯುವದೇಕೆ ಎಂದು ಬೇನೆಯ ಜೀವಕ್ಕೆ ಬೇಸತ್ತು ಆಡಿದ ಮಾತನ್ನು ಆರೋ ಗ್ಯವಂತನಾದ ಮೇಲೂ ಹಾಗೆಯೇ ನಡೆಯಿಸಬೇಕೇ? ವೈದ್ಯರಿಂದ 'ಸಾಯದ, ರೋಗದಿಂದ ಸಾಯದ, ಔಷಧಗಳಿಂದ ಸಾಯದ, ಸ್ವ ಪ್ರಯತ್ನಗಳಿಂದಲೂ ಸಾಯದ ಈ ಜೀವದಿಂದ ಯಾವದಾದರೂ ಮಹ ತ್ವದ ಕಾರ್ಯವಾಗುವದಿದೆಯೋ ಯಾರು ಬಲ್ಲರು? ಈಗ ನನ್ನ ಜೀವನದಲ್ಲಿ ಯಾವದೂ ಅತಿಯಿಲ್ಲ, ಎಲ್ಲವೂ ಮಿತಿ. ಆಹಾರ, ವಿಹಾರ ವಿಚಾರ, ಆಚಾರ, ಎಲ್ಲವೂ ಸುಸೂತ್ರ. ಸಾವು ನನ್ನ ಜೋಡಿಯಾಡಿತು ಕೆಲವು ದಿವಸ ಈಗ ನಾವಿಬ್ಬರೂ ಗೆಳೆಯರು, ಒಬ್ಬರ ದ್ವೇಷ ಒಬ್ಬರಿಗಿಲ್ಲ ಕೆಲವರ ಸರಸ ವಿರಸವಾಗುವದು ನನ್ನ ಸರಸ ಸರಸ-ತರವಾಯಿತು ಮೃತ್ಯುವಿನಿಂದ ಅಮೃತತ್ವದ ಹಾದಿ ಯನ್ನು ಹುಡುಕುವದು ಎನ್ನುವರು. ಅದು ಇದೇ ಇರಬಹುದೇ? ಹಾಗಾದರೆ ಇದೇ ಸರಸ, ಇದಕ್ಕೂ ಬೇರೆ ಸರಸಾವುದು?



# ಮಾನಪತ್ರ ಸಮಾರಂಭ



**ಪತ್ರಂ ಪುಷಂ ಫಲಂ ತೋಯಂ**

— ಶ್ರೀಮದ್ಭಗವದ್ಗೀತಾಸು ಉಪನಿಷತ್ಸು

ಮಾನಪತ್ರ ಸಮಾರಂಭ! ಆಹ ನಯನಾನಂದವೇ! ನಯನೋತ್ಸವವೇ!

ಸತತಮಪಿ ನಃ ಸ್ವೈಚ್ಛಾದೃಶ್ಯೋ ನವೋನವ ಏವ ನಃ ॥

— ಶ್ರೀ ಭವಭೂತಿ

ಎಷ್ಟು ಸಲ ನೋಡಿದರೂ ಹೊಸಹೊಸದಾಗಿಯೇ ಇದು ತೋರುವದಲ್ಲ! ಮಾನಪತ್ರ ಸಮಾರಂಭವು ಕೆಲವರಿಗೆ ಸಿಹಿ ಸಿಗುವದರಿಂದ ಹಬ್ಬವೆನಿಸಬಹುದು, ಗ್ಯಾಸಲೈಟ್ ಬೆಳಕಿನ ಮೂಲಕ ಹುಣ್ಣಿವೆಯೆನಿಸಬಹುದು, ಆದರೆ ನನಗಂತೂ ಭಗವಾನ ಶ್ರೀಕೃಷ್ಣರು ಪರಮಪೂಜ್ಯ ಭಗವದ್ಗೀತೆಯಲ್ಲಿ ಅನ್ನುವಂತೆ “ಸರ್ವಾರಂಭಾಹಿ ದೋಷೇಣ ಧೂಮೇನಾಗ್ನಿರಿವವೃತಾಃ ॥” ಸರ್ವಾರಂಭದಂತೆ ಮಾನಪತ್ರಸಮಾರಂಭವೂ (ಮೈಸೂರು, ಮದ್ರಾಸು, ಬಳ್ಳಾರಿ, ಮಂಗಳೂರು, ಅರ್ಥಾತ್ ಉತ್ತರ ಕರ್ನಾಟಕ ಬಿಟ್ಟು ಎಲ್ಲ ಕಡೆಗೂ) ದೋಷಗಳಿಂದಲೂ ಧೂಮವೆಂದರೆ ಹೊಗೆಯಿಂದಲೂ [ ಗಾವರೀ ಸಾಹೇಬರಿದ್ದರೆ ಸಿಗಾರೇಟ್, ದೇಶೀ ಜನರಿದ್ದರೆ ಬೀಡಿ ] ಮುತ್ತಲ್ಪಡುವದರಿಂದ ಮಾನಪತ್ರ ಪ್ರಸಂಗಕ್ಕೆ ಸಮಾರಂಭವೆನ್ನಲೇನೂ ಪ್ರತ್ಯವಾಯವಿಲ್ಲ.

ಪ್ರಾಕೃತದಲ್ಲಿ ಅಸಹ್ಯವೆನಿಸುವ ಮಾತುಗಳನ್ನು ಸಂಸ್ಕೃತವನ್ನಾಗಲಿ ಇಂಗ್ಲೀಷವನ್ನಾಗಲೀ ಆಶ್ರಯಿಸಿ ಮಾತಾಡುವ ರೂಢಿಯು

ಶಿಷ್ಟರಲ್ಲುಂಟು.

**ಉದಾ** — ಶೌಚ, ವಾಯಿಫ್, ಇತ್ಯಾದಿ.

ಹಾಗೆ ಕರ್ತವ್ಯದ ಕಾಟವನ್ನಾಗಲಿ ಕಿಂಕರ್ತವ್ಯತಾಮೂಢರ ಕಾಟವನ್ನಾಗಲಿ, ತಪ್ಪಿಸಿಕೊಳ್ಳುವದಿದ್ದರೆ ಮಾನಪತ್ರಗಳನ್ನು ಕೊಡುವದೊಂವೇ ಶಿಷ್ಟಸಮ್ಮತ ಮಾರ್ಗವಾಗಿದೆ ಇದು ನನಗೆ ಮೊದಲು ಗೊತ್ತಿದ್ದಿಲ್ಲ. ನನ್ನೊಬ್ಬ ಪರಮಸ್ನೇಹಿತರಾದ ವಕೀಲರು ಇದರ ರಹಸ್ಯವನ್ನು ನನಗೆ ಹೇಳಿಕೊಟ್ಟರೆಂದು ಪ್ರಕಟವಾಗಿಯೂ ಕೃತಜ್ಞತಾಪೂರ್ವಕವಾಗಿಯೂ **ಲೇಖೀ** ಬರೆದು ಕೊಟ್ಟಿರುತ್ತೇನೆ ಒಮ್ಮಾನೊಮ್ಮೆ ಏನಾಯಿತೆಂದರೆ, — ೧೯೦೮ ರಲ್ಲಿ ಇರಬಹುದು. ನನ್ನ ಒಬ್ಬ ಗೆಳೆಯರು ದೇಶಕಾರ್ಯಮಾಡಿ ಜೇಲಿನೊಳಗಿಂದ ಬಂದರು ಇವರು ನನಗೆ " ದೇಶಕಾರ್ಯ ಮಾಡಿರಿ " ಎಂದರೆ ಹ್ಯಾಗೆ ಮಾಡಬೇಕು ? " " ತನ್ಮಿತ್ರಮಾನಸಿ ಸುಖೇ ಚ " ಇದನ್ನು ಹ್ಯಾಗೆ ತೋರಿಸಬೇಕು ? ಕೆಲಸವಾಗಿರಬೇಕು—ಕಾಸು ಹೋಗಿಗ ಬಾರದು ಇದಕ್ಕೆ ಹ್ಯಾಗೆ ಮಾಡಬೇಕು ? " ಇವೇ ಮೊದಲಾದ ಅನೇಕ ಚಿಂತೆಗಳಿಂದ ನಾನು ಪೀಡಿತನಾಗಿರಲು, ಪಕ್ಷಕಾರರನ್ನು ಕಕ್ಷಕಾರರನ್ನಾಗಿ ಮಾಡಿಕೊಳ್ಳಲು ಬಲ್ಲ ಮೋಹಕ ನಗೆಯಿಂದ ನಮ್ಮ ವಕೀಲ ಮಿತ್ರರು ಯೋಗ್ಯಕಾಲಕ್ಕೆ ಶ್ರೀನಾರದನಂತೆ ಬಂದರು ಅವರಿಗೆ Advice ಕೇಳಿದರೆ ಎಲ್ಲಿ ನನ್ನ ಕಡೆಯಿಂದ ರೊಕ್ಕಸೆಳೆಯುವರೋ ಎಂಬ ಭೀತಿಯಿಂದ ನಾನು ಅವರಿಗೆ ಏನೂ ಕೇಳದೇ ಸಭ್ಯಗೃಹಸ್ಥನಂತೆ ನಕ್ಕು " ಯಾಕೆ ಬರೋಣವಾಯಿತು ? " ಎಂದು ಕೇಳಿದೆನು. ಅವರು ಅಂತರ್ದೃಷ್ಟಿಯಿಂದೋ, ಧೂರ್ತದೃಷ್ಟಿಯಿಂದೋ, ನನ್ನ ಚಿಂತೆಯನ್ನು ತಿಳಿದೋ ತಿಳಿಯದೆಯೋ " ವಾದೇ ಭ. ಕುಲಕರ್ಣಿಯವರು ಜೇಲಿನಿಂದ ಬಂದರು ಅವರಿಗೆ ಸನ್ಮಾನ ಮಾಡಬೇಕಾಗಿರುವದು; ಏನು ಯೋಚನೆ ಮಾಡುವಿರಿ ?" ಎಂದು ನನ್ನನ್ನು ದಿಟ್ಟಿಸಿ ಗಟ್ಟಿಸಿ ಕೇಳಿದರು [ ನನಗಿನ್ನೂ ಆವಾಗ್ಗೆ ಸರ್ ಪದವಿ ಸಿಕ್ಕಿರಲಿಲ್ಲ ] " ಕುಟುಂಬ ದೊಡ್ಡದು; ಮೇಲಾಗಿ

ಬಡವರು; ಮೇಲಾಗಿ ನೌಕರರು; ಮೇಲಾಗಿ ಸಮಾಜದಲ್ಲಿ ನಮಗೆ ಮಾನವಿಲ್ಲ." ಎಂದು ನಾಲ್ಕು ಅಂತಸ್ತಿನ ಉತ್ತರವನ್ನು ಕೊಟ್ಟೆನು. ಅದನ್ನು ಕೇಳಿ ಅವರು ನಸುನಕ್ಕು 'ಅದಕೇತಕಿಷ್ಟು ಚಿಂತೆ ? ಮಾ-ನಪತ್ರ ಕೋಡೋಣ' ಎಂದು ಕಣ್ಣಿವಟಿದರು ಆಗ್ಗೆ ನನಗೆ ಮಾನ ಪತ್ರದ ರಹಸ್ಯವು ಹೊಳೆಯಿತು ಮಾ= [ ಲಕ್ಷ್ಮಿ, ದುಡ್ಡು] ನ= ( ಇಲ್ಲ ) ದುಡ್ಡು-ದುಗ್ಗಾಣಿ ಇಲ್ಲದ ಪತ್ರ ಅಥವಾ ಮಾ= ( ಇಲ್ಲ ). ನ= ( ಇಲ್ಲ ) "ನಮ್ಮ ಕಡೆಯಿಂದ ಏನೂ ಆಗುವದಿಲ್ಲ, ಆಗುವದಿಲ್ಲ. ನೀವೇ ಎಲ್ಲ ಮಾಡಬೇಕು." ( ಒತ್ತಿ ಹೇಳುವದಕ್ಕಾಗಿ ದ್ವಿರುಕ್ತಿ. ಮುಖಬಾಗಲ ಇವರ ನುಡಿಗಟ್ಟು ಓದಬೇಕು. ) ಹೀಗೆ ಹೀಗೆ ಮಾ-ನ ಶಬ್ದದ ನಿರುಕ್ತ್ಯಾರ್ಥವಿರಬೇಕೆಂದು ನನಗೆ ಆವಾಗ್ಗೆ ಹೊಳೆಯಿತು. ಇರಲಿ.

ಈ ಅರ್ಥ ತಿಳಿದಂದಿನಿಂದ ಸಿಕ್ಕಸಿಕ್ಕವರಿಗೂ ಬೇಕುಬೇಡಾದವರಿಗೂ ಮಾನಪತ್ರವನ್ನು ಕೊಡುವದಕ್ಕಾಗಿ ನಾನು ಕೈ ತೊಳೆದುಕೊಂಡು ಬೆನ್ನು ಹತ್ತಿದೆನು. ಕೆಲವು ದಿವಸಗಳ ಕೆಳಗೆ ನಾನು ನಮ್ಮ ಬಡತರ್ಫ ( Dismiss ) ಮಾಡಿದ ಆಳು ಮ ಗ ನಿ ಗೂ ಒಂದು ತುಣುಕು ಮಾನಪತ್ರವನ್ನು ಕೊಟ್ಟೆನು. ಮಾದರಿಗಾಗಿ ಅದರ ಕೆಲ ಭಾಗವನ್ನು ಇದರಡಿಯಲ್ಲಿ ಕೊಡುತ್ತೇನೆ

" ಇವನು ಬಹಳ ಪ್ರಾಮಾಣಿಕನು ಯಾವಾಗಲೂ ಸೆರೆ ಕುಡಿದು ಮನೆ ಕಾಯುತ್ತ ಬಿದ್ದು ಕೊಂಡಿರುತ್ತಿದ್ದನು. ಇವನು ನಿರಿಚ್ಛನಿದ್ದರೂ, ಇವನಿಗ ಬಹಳ ಅನುಭವ ಬರಲೆಂದು ನಾನೇ ನಮ್ಮಲ್ಲಿಯ ಕೆಲಸದಿಂದ ಇವನ ಬಿಡ ಗಡೆ ಮಾಡಿರುವೆನು ಬೇಕಾದವರು ಇವನನ್ನು ಆಳಾಗಿ ತಮ್ಮಲ್ಲಿಟ್ಟು ಕೊಳ್ಳಬಹುದು. ಇತಿ,

ಇವನ

**ಸ್ವದಸ್ತೂರ ( ಪೂರ್ವದ ಯಜಮಾನ. )**

**ಕಲೆಕ್ಟರ, ಜಜ್ಜ, ಇಂಜನಿಯರ, ಡ್ರಾಯವ್ಹರ, ಮಾಮಲೇ**

ದಾರ, ಚೋಪದಾರ, ಇವರೆಲ್ಲರ ಎಲ್ಲ ಆಶೆಗಳು ತೃಪ್ತವಾಗಿದ್ದರೂ, ಪ್ರಯಾಣಕಾಲ ಸಮೀಪಿಸಿದಂತೆ, ಮಾನಪತ್ರದ ಆಶೆಯೊಂದು ಬಹಳ ಬಲವತ್ತರವಾಗುತ್ತದೆ. ಪರಲೋಕಪ್ರಯಾಣಮಾಡಲು ಸಿದ್ಧನಾದ ಮರಣಾಸನ್ನ ಮುದುಕನು ಮತ್ತೊಂದು ಪ್ರಾಂತದಲ್ಲಿ ನೌಕರಿಗಿರುವ ಮಗನ ಮೋರೆಯನ್ನಷ್ಟು ನೋಡಬೇಕೆಂದು ಆಶೆಪಡುವಂತೆ ಇವರಾದರೂ ನಿರಾಶೆಯಿಂದ ಮಾನಪತ್ರದ ಹಾದಿಯನ್ನು ಹಗಲಿರುಳು ಕಾಯುತ್ತಿರುತ್ತಾರೆ. [ ಮರಣೋನ್ಮುಖರ ಆಶೆಯುಳಿದರೆ ದೆವ್ವವಾಗಿ ಕಾಡಬಹುದೆಂಬ ಭೀತಿಯಿಂದ ಇವರ ಇಚ್ಛೆಗಳನ್ನು ಪೂರ್ಣ ಮಾಡಲು ಸುತ್ತಲಿನವರು ಯತ್ನಿಸುವಂತೆ ಕಡೆಗೊಮ್ಮೆ ಯಾವನಾದರೂ ದೀನ ದಾಸನು ಮಾನಪತ್ರವನ್ನು ಕೊಡುವನು ]

ಊಟದಲ್ಲಿ ಚಿತ್ರಾಹುತಿ, ನಮಸ್ಕಾರ ಮಾಡಿದರೆ ಆಶೀರ್ವಾದ; ಗುಡಿಯನ್ನು ನೋಡುತ್ತಲೇ ಸನುಸ್ಕಾರ, ಹೆಸರಿನ ಹಿಂದೆ ರಾ|| ರಾ|| ಅಥವಾ ಮ. ರಾ, ದೇವರಿಗೆ ನೈವೇದ್ಯ; ಯಾರಾದರೂ ಏನಾದರೂ ಮಾಡಿದರೆ ಮಾನಪತ್ರ, ಇವೇ ಮುಂತಾದವುಗಳನ್ನು ವಿಶ್ವಾಸವಿಲ್ಲದಿದ್ದರೂ ಮಾಡಬೇಕು, ವಿಶ್ವಾಸವಿದ್ದಂತೆಯೂ ಮಾಡಬೇಕು. ವಿಧಿ-ನಿಷೇಧ ನೋಡಬಾರದು. ಶುಭಸ್ಯ ಶೀಘ್ರಂ. ಮುಹೂರ್ತ ನೋಡಬಾರದು. ಹೊತ್ತಿಲ್ಲದ ಹೊತ್ತಿನಲ್ಲಿಯೂ ಹೊತ್ತಲ್ಲದ ಹೊತ್ತಿನಲ್ಲಿಯೂ ಇಂಥ ಸಮಾರಂಭಗಳನ್ನು ನೆರೆಯಿಸಬೇಕು ಶಿಕ್ಷಕರು ವಿದ್ಯಾರ್ಥಿಗಳಿಗೆ Good conduct certificate ಗಳನ್ನೂ ಕನ್ನಡ ದೈನಿಕ ಪತ್ರಗಳು ಅಗ್ರಲೇಖಗಳನ್ನೂ ಆಧುನಿಕ ಕವಿಗಳು ಕವಿತೆಗಳನ್ನೂ ಸಿ. ಆಯ್. ಡಿ. ರಿಪೋರ್ಟರರು ರಾಜಕೀಯ ಭಾಷಣಗಳ ರಿಪೋರ್ಟನ್ನೂ ರೂಢಿಯಿದ್ದಂತೆಯೂ ಹೊತ್ತು ಬಂದಂತೆಯೂ ಸ್ವಕಲ್ಪನೆಯಂತೆ ಉಪ್ಪುಖಾರವನ್ನು ಹಚ್ಚಿಯೂ [ ಹಿಗ್ಗಿಸಿದಂತಾಗಿರಬೇಕು ಕುಗ್ಗಿಸಿದಂತಾಗಿರಬೇಕು ] ಸಾಕ್ಷಿದಾರನು ದೇವರ ಆಣೆ ಇಟ್ಟುಕೊಂಡು ಹೇಳುವಷ್ಟು ಶ್ರದ್ಧೆಯಿಂದ ಬರೆಯುವಂತೆ ಮಾನಪತ್ರವನ್ನು ಬರೆಯಬೇಕು.

ಸಕಲದ ಸೌಕರ್ಯಕ್ಕಾಗಿ Pocket Lanp ( ಕಿಸೆಯೊಳಗಿನ ದೀಪ ) Folding chair (ಮಡಿಚಿಡುವ ಖುರ್ಚಿ) Travelling

Bed ( ಪ್ರವಾಸದ ಹಾಸಿಗೆ ) Handy Camera ( ಕೈಯಲ್ಲಿ ಒಯ್ಯಬಹುದಾದ ಛಾಯಾಯಂತ್ರ) ಮುಂತಾದ ಶೋಧಗಳು ಇತ್ತೀಚೆ ಪ್ರಕಾಶವಾದಂತೆ, ಮಾನಪತ್ರಗಳ ಸುಲಭ ಪದ್ಧತಿಗಳೂ ಬಹಳ ಹೊರ ಟಿವೆ. ಜಗತ್ತಿನಲ್ಲಾಗಿದ್ದೆಲ್ಲ ತಾವೇ ಮಾಡಿದವರು ಅಥವಾ ಮಾಡಿಸಿದ ವರೆಂದು ವಾಚ್ಯವಾಗಿಯೂ ಲಕ್ಷಣದಿಂದಲೂ ವ್ಯಂಗ್ಯದಿಂದಲೂ ಧ್ವನಿ ಯಿಂದಲೂ ಹೇಳಿಕೊಳ್ಳುವವರು ತೋಂಡೀ (Oral) 'ಸ್ವಯಂಮಾನ ಪತ್ರದ ಪದ್ಧತಿ'ಯವರೆಂದೆನಿಸಿಕೊಳ್ಳುವರು. ತಾವು ದೊರಕಿಸಿಕೊಂಡ ಪದಕಗಳ ಪ್ರದರ್ಶನ ಮಾಡುವವರೂ ಮತ್ತು ಸರ್ಟೀಪರ(certificate ಇದರ ತದ್ಭವ ) ಗಳ ಹೊರೆಗಳನ್ನೂ, ವೃತ್ತಪತ್ರಿಕೆಗಳಲ್ಲಿಯೂ ಖಾಸಗಿ ಪತ್ರಗಳಲ್ಲಿಯೂ ಅವರ ಬಗ್ಗೆ ಕಿಂಚಿತ್ ಪ್ರಶಂಶಾಪರ ಶಬ್ದವುಳ್ಳಮತ್ತು ಕೆಂಪು ನೀಲ ಪೆನ್ಸಿಲಿನಿಂದ ಬಣ್ಣಿಸಿದ ವಾಕ್ಯಗಳನ್ನೂ ಬಂದಹೋದಲ್ಲಿ ಜನರಿಗೆ ತೋರಿಸಿ ನಿರಭಿಮಾನಿಗಳಂತೆ ಕೊಡುವವರೂ 'ತಟಸ್ಥ ಮಾನ ಪತ್ರ ಪದ್ಧತಿ ' ಯವರೆಂದೆನಿಸಿಕೊಳ್ಳುವರು ಎಲ್ಲ ಪ್ರಮುಖರ ನಿಂದೆ ಮಾಡಿ ತಮ್ಮ ಸ್ತುತಿಯಾಯಿತೆಂದು ತಿಳಿದುಕೊಳ್ಳುವ ಮಹಾತ್ಮರು 'ಅವಧೂತ ಅಥವಾ ದಿಗಂಬರ ಪದ್ಧತಿ 'ಯವರಂದೆನಿಸಿಕೊಳ್ಳುವರು. ಇನ್ನೂ ಮಾನಪತ್ರದ ಪದ್ಧತಿಯ ಅನೇಕ ಶಾಖೆಗಳೂ ಉಪಶಾಖೆಗಳೂ ಇರುವವು. ವಿಸ್ತಾರಭಯದಿಂದ ದಿಙ್ಮಾತ್ರವಾಗಿ ಹೇಳಿರುವೆನು.

ಮೊನ್ನೆ ಮೊನ್ನಿನವರೆಗೆ ಈ ಮಾನಪತ್ರ ಪದ್ಧತಿಯು ಸಾಹೇಬರ ಕೂಡ ವಿಲಾಯಿಂದೇ ಬಂದದ್ದೀ ಇರಬೇಕೆಂದೂ, ಇಲ್ಲದಿದ್ದರೆ ಇದಕ್ಕೆ ರಾಜಾಶ್ರಯವು ದೊರೆಯುತ್ತಿರಲಿಲ್ಲೆಂದೂ ನಾನು ಬಗೆದಿದ್ದೆನು. ಆದರೆ ನನ್ನ ಈ ಭ್ರಮವನ್ನು, ಶಾಲನ್ನು ತಲೆಗೆ ಸುತ್ತಿಕೊಂಡಿದ್ದ ಒಬ್ಬಾ ನೊಬ್ಬ ಪಂಡಿತರು ದೂರ ಮಾಡಿದರು. ಏನಾಯಿತೆಂದರೆ— ಒಬ್ಬಾ ನೊಬ್ಬ ಜಜ್ಜ ಸಾಹೇಬರಿಗೆ ಮಾನಪತ್ರ ಕೊಡುವ ದುರ್ಧರ ಪ್ರಸಂಗವು ನಮ್ಮೂರಿನ ಬಾರಿ ( Bar ) ನವರಿಗೆ ಬಂದಿರಲಾಗಿ, ಅನ್ಯಾಯ ವನ್ನೂ ಕೂಡಾ ನ್ಯಾಯವಿದ್ದಂತೆ ನ್ಯಾಯ ದೇವತೆಯ ಪರೋಕ್ಷದಲ್ಲಿ ಪ್ರತಿಪಾದಿಸುವ ಅತಿರಥಿ ಮಹಾರಥಿ ವಕೀಲ ಪ್ರಮುಖರಿಗೂ 'ಇವನ್ನ ಗುಣಗಳನ್ನೇನೆಂದು ಸ್ತುತಿಸಬೇಕೆಂಬುದು ಬಗೆಹರೆಯದಾಗಲು, ಜಜ್ಜ

ಸಾಹೇಬರಿಗೆ ಕನ್ನಡ ಕಲಿಸುತ್ತಿದ್ದ ಶಾಸ್ತ್ರಿಗಳು ನಂಸ್ಕೃತದಲ್ಲಿ ಮಾನಪತ್ರ ಕೊಡುವ ಹಂಚಿಕೆಯನ್ನು ಹೇಳಿದರು. ಶಾಸ್ತ್ರಿಯವರೇ ಆ ಶ್ಲೋಕಗಳನ್ನು ಸಿದ್ಧಮಾಡಿಕೊಂಡು ಬರಬೇಕಾಯಿತು. ಅವರು ಭೋಜ ಪ್ರಬಂಧದೊಳಗಿನ ನಾಲ್ಕಾರು ಸ್ತುತಿಪರ ಶ್ಲೋಕಗಳನ್ನು ಬರೆದು ಕೊಂಡು ಬಂದರು. ಮತ್ತು ತಮ್ಮ ಲಘುವ್ಯಾಖ್ಯಾನ ( Short - Speech ) ದಲ್ಲಿ "ತಾವು ಬುದ್ಧಿವಂತರಿದ್ದೀರಿ, ಪಂಡಿತರಿದ್ದೀರಿ, ತಮ್ಮ ಗುಣಗಳನ್ನು ವರ್ಣಿಸಲು ನಮಗೆ ಬಾಯಿಯಿಲ್ಲ, ತಮ್ಮ ನ್ಯಾಯದ ಬೆಳಕು ಪ್ರಾಂತದಲ್ಲೆಲ್ಲಾ ಬಿದ್ದಿದೆ. ತಮ್ಮ ಕೀರ್ತಿ ಎಲ್ಲರ ಬಾಯಲ್ಲಿಯೂ ನೆಲೆಗೊಂಡಿದೆ. ನಾವು ಸತ್ತರೂ ಜನ್ಮ ಜನ್ಮಕ್ಕೂ ತಮ್ಮನ್ನು ಮರೆಯುವಂತಿಲ್ಲ. ತಮ್ಮನ್ನೂ ತಮ್ಮ ಮಕ್ಕಳ ಮರಿಗಳನ್ನೂ ಪರಮೇಶ್ವರನು ನೋಡಿಕೊಳ್ಳದೆ ಎಂದೂ ಬಿಡಲಿಕ್ಕಿಲ್ಲ" ಇತ್ಯಾದಿ ಹೇಳಲು, ಸಾಹೇಬರು ವ್ಯಾಖ್ಯಾನವು 'Poetic' ( ಕಾವ್ಯಮಯ ) ವಾಯಿತೆಂದು ನಕ್ಕರು. ನಾನು ಮಾತ್ರ ನಮ್ಮ ವಕೀಲ ಮಿತ್ರರ ಹತ್ತರ ಸ್ತಂಭಿತನಾಗಿ ಕುಳಿತುಕೊಂಡಿದ್ದೆದು. ಸಮಾರಂಭವು ಮುಗಿಯಿತು. ನಾನು ಶಂಕಾಕುಲಿತನಾಗಿ ಶಿಷ್ಯಭಾವದಿಂದ ಶಾಸ್ತ್ರಿಗಳ ಸಮೀಪಕ್ಕೆ ಹೋಗಿ "ಏನು ಶಾಸ್ತ್ರಿಗಳೇ ! ಇಂಥ ಅಶಾಸ್ತ್ರೀಯ ಸಮಾರಂಭದಲ್ಲಿ ತಾವು ಸೇರಿಕೊಂಡದ್ದು ಹೇಗೆ ? ಇದೇನು ಸನಾತನ ಆಚಾರವೋ ? ಎಂದು ಪ್ರಶ್ನೆ ಮಾಡಲು ಶಾಸ್ತ್ರಿಗಳು ಸೇಖರಿಸಿ " ಇದು ಸನಾತನವಿರದಿದ್ದರೂ ಪುರಾತನವಿದೆ.— ಪತ್ರಂ ಪುಷ್ಪಂ ಫಲಂ ತೋಯ || ಶ್ರೀ ಭಗವದ್ಗೀತಾಸು ಉಪನಿಷತ್ಸು....ಹೇಹೇಹೇ !" ಅಂದರು. ನಾನು ಮುಗ್ಧಬಾಲಕನಂತೆ ಅವರ ಮೋರೆಯನ್ನು ಮಿಕಿ ಮಿಕಿ ನೋಡುತ್ತ ನಿಂತೆನು. 'ಅರ್ಥವು ತಿಳಿಯಲೊಲ್ಲದೋ ? ಸರ್ವಜ್ಞನಾದ ಶ್ರೀಕೃಷ್ಣ ಪರಮಾತ್ಮನು ಮಾನಪತ್ರ ಸಮಾರಂಭ ವಿಧಿಯನ್ನು ಸೂತ್ರರೂಪವಾಗಿ ಹೇಳಿರುವನು. ಪಾಮರರಿಗೆ ತಿಳಿಯಲಾರದು. ಪಾಶ್ಚಾತ್ಯರು ಸ್ವತಂತ್ರ ಬುದ್ಧಿಯವರಾಗದಿದ್ದರೂ ಕುಶಾಗ್ರ ಬುದ್ಧಿಯುಳ್ಳವರು. ಅವರು ಶ್ರೀ ಮದ್ಭಗವದ್ಗೀತೆಯೊಳಗಿಂದಲೆ ಈ ಮಾನಪತ್ರ ಸಮಾರಂಭ ವಿಧಿಯನ್ನು ಸ್ವೀಕಾರ ಮಾಡಿರಲಿಕ್ಕೇಬೇಕು. ಇಂಥ ಶಿಷ್ಟಾಚಾರವು ಭರತಭೂಮಿ

ಯಲ್ಲಿಯೇ ಹುಟ್ಟಿರಲಿಕ್ಕೆಬೇಕು." ಹೀಗೆಂದು ನನ್ನಕಡೆಗೆ ನೋಡಿದರು. ನನ್ನ ಮುಖೇಂದವು ಇನ್ನೂ ಸಂಶಯ ಗ್ರಸ್ತವಿದ್ದಿತು. "ಮಾನಪತ್ರ ಸಮಾರಂಭದ ಮೊದಲನೇ ವಿಧಿಯೆಂದರೆ, **ಪತ್ರಂ,** ಮಾನಪತ್ರಕೊಡು ವದು ಆಮೇಲೆ **ಪುಷ್ಪಂ,** ಹೂಮಾಲೆಯನ್ನು ಹಾಕುವದು ಆಮೇಲೆ **ಫಲಂ,** ಹಣ್ಣು! ಬಾಳೆಹಣ್ಣು ಕೊಡುವದು. ಆಮೇಲೆ **ತೋಯಂ,** ಚಹಾ! ಬಹಳಷ್ಟು ತೋಯ ಹಾಕಿದ ಚಹಾ, ದೇಶೀ ಸಮಾರಂಭ ವಿದ್ದರೆ ನೀಲಗಿರಿ ಕಾಫಿ" ಹೀಗೆಂದವರೇ ಗಡಿಬಿಡಿಯಿಂದ ಹೊರಟು ಹೋದರು

ನಾನು ಆವಾಗ್ಗೆ ಉಸುರಾಡಿನಹತ್ತಿದೆನು. ನಾನು ಅಂದಿನಿಂದ ಮಾನಪತ್ರಗಳ ಮಾನ ಕಾಯಹತ್ತಿದೆನು. ಬಿರುದುಗಳ ಬೆನ್ನುಬಿದ್ದೆನು ಮೆಡ್ಲುಗಳಿಗೆ ಮೆಚ್ಚಿದೆನು ಮಾನಪತ್ರ ರಹಸ್ಯ ತಿಳಿದ ದಿನವು ನನಗೆ ಪುನರ್ಜನ್ಮವೆನಿಸಹತ್ತಿತು ಯಾವ ಅನುಷ್ಟುಪಾರ್ಥ ಕೇಳಿ ನನ್ನಲ್ಲಿ ಇಂಥ ಕ್ರಾಂತಿಯುಂಟಾಯಿತೋ ಆ ಸಂಸ್ಕೃತ ವಾಣಿಯನ್ನೇ ನನ ಈ ವಾಮರ ಲೇಖನದ ಆಧಾರಕ್ಕೆ ಬರೆದಿರುವೆನು ಇಲ್ಲಿಗೆ 'ಮಾನ ಪತ್ರ" ಸಮಾರಂಭ ರಹಸ್ಯವು ಸಂಪೂರ್ಣವಾಯಿತು ಹರಯೇ ನಮಃ!



# ಕಸಬರಿಗೆ



ಗಹನ ವಿಚಾರಗಳು ಇತ್ತೀಚೇಗೆ ಜನರ ಮನಸ್ಸಿಗೆ ಸೇರಬಾಗಿವೆ; ಅಂತೆಯೆ ತಲೆಯಲ್ಲಿಯೂ ಸೇರದಾಗಿವೆ. ಮೊಲಿನ ಜನರು ಗಹನ - ಗಿರಿ - ಗವ್ಹರಗಳಲ್ಲಿರುತ್ತಿದ್ದರು; ಅವರ ವಿಚಾರಗಳೂ ಗಹನವಾಗಿಯೂ, ದೊಡ್ಡ ಗುಡ್ಡದಂತಹವುಗಳಾಗಿಯೂ ಗೂಢವಾಗಿಯೂ ಇರುತ್ತಿದ್ದವು. ನಮ್ಮ ಸುತ್ತಲಿನ ಸೃಷ್ಟಿಯು ನಮ್ಮ ಮನಸ್ಸಿಗೆ ರೂಪಗೊಡುವದು ಎಂಬ ಮಾನಸಶಾಸ್ತ್ರಿಗಳು ಹೇಳುವದಿಲ್ಲವೇ ? ಇತ್ತೀಚಿನ ಜನರು ಬಯಲಿನಲ್ಲಿದ್ದು ತಮ್ಮ ಮನೆಗಳಲ್ಲಿ ಗಾಳಿ – ಬೆಳಕುಗಳಿಗೆ ಹೆಚ್ಚು ಅವಕಾಶವನ್ನು ಕಲ್ಪಿಸಿ ಕೊಡುವರು. ಅದರ ಪರಿಣಾಮವೇನಂದರೆ — ಅವರ ವಿಚಾರದಲ್ಲಿ ಗಾಳಿಗೆ ಗಾಳಿ, ಮನಸ್ಸಿನಲ್ಲಿ ಬಯಲಿಗೆ ಬಯಲು, ತಲೆಯಲ್ಲಿ ಬೆಳ್ಳಂಬೆಳಕು ಎಂದು ಹೇಳಬೇಕಾದೀತು. ಇದು ಸತ್ಯವಿರಬಹುದಾದರೂ ಅಪ್ರಿಯವಾದುದು. ಶ್ರೇಯಸ್ಕರವಾದುದು ಪ್ರಿಯವಾಗಿರುವದು ಅಪರೂಪ ಆದರೆ ' ನ ಬ್ರೂಯಾತ್ ಸತ್ಯಮಪ್ರಿಯಂ ' ಎಂದು ದೊಡ್ಡವರು ಹೇಳಿದ್ದಾರೆ. ಆದಕಾರಣ ಈ ವಿಚಾರವನ್ನು ಇಲ್ಲಿಗೆ ಬಿಡುವಾ.

ಈಗಿನ ಕಾಲ ಸ್ವಲ್ಪ ತಿರುಗುಮುರುಗು; ಬುಡಮೇಲಾದ ಕಾಲ. ಹಿಂದಿನವರು ಹಾಲಿನಲ್ಲಿ ಸ್ವಲ್ಪ ನೀರು ಬೆರಸಿ ಕುಡಿದರೆ, ಇಂದಿನವರು ನೀರಿನಲ್ಲಿ ಸ್ವಲ್ಪ ಹಾಲು ಬೆರಸಿ ಕುಡಿಯುವರು. ಅರಗಬಹುದಾದನ್ನೂ ದಕ್ಕಬಹುದಾದುದನ್ನೂ ತಿನ್ನಬೇಕು, ಕುಡಿಯಬೇಕು. ಈಗಿನವರು ಬಹಳ ವಿಚಾರಿಗಳಲ್ಲದಿದ್ದರೂ ಸಲ್ಪ ವಿವೇಕಿಗಳು. ತಮ್ಮ ತಮ್ಮ ರುಚಿಯನ್ನು ಅವರು ಬಲ್ಲರು. ರುಚಿಸಿದ್ದಲ್ಲವೇ ಅರಗುವದು, ದಕ್ಕುವದು ? — ಯಾವ ಪಂಡಿತರೂ

ಉಂಡದ್ದರಿಂದ ತನಗೆ ಬಲ ಬರಬೇಕು, ಆರೋಗ್ಯವುಂಟಾಗಬೇಕು ಎಂಬ ಆಶೆಯೇನೊ ಆಗಿನವರಂತೆಯೆ ಇದೆ

ಆಗಿನವರಂತೆ ಈಗಿನವರಿಗೂ ನಿರ್ಮಲವಿಚಾರಗಳೂ ಆಚಾರಗಳೂ ಬೇಕಾಗಿವೆ. ಆದರೆ ಅವು ರುಚಿಸಬೇಕಾದರೆ ಹೇಳುವರೀತಿ ಬೇರೆಯಾಗಬೇಕು. ಸತ್ತ್ವವೂ ತತ್ವವೂ ಅದೇ ಉಳಿದರೂ, ರೂಪವೂ ರುಚಿಯೂ ಬದಲಾಗಬೇಕು. ಮೊನ್ನೆ ನಾನೊಬ್ಬರಿಗೆ "ನೀತಿಯೆ ಮನುಷ್ಯನನ್ನ ದೇವರನ್ನಾಗಿ ಮಾಡುವದು" ಎಂದೆ, ಅವರು ಆಕಳಿಸಿದರು. "ಸಿದ್ಧಾರ್ಥನು ಬುದ್ಧನಾದದ್ದಾದರೂ ಹೇಗೆ ?" ಎಂದೆ, ಅವರು ತೂಕಡಿಸಿದರು "ಶುದ್ಧ - ಬ್ರಹ್ಮದ ಸಾಕಾರಮೂರ್ತಿಯೆ ಎಂಬಂತೆ ಅವನ ಚರಿತ್ರವಿತ್ತು" ಎಂದೆ, ಅವರು ನಿದ್ದೆಮಾಡತೊಡಗಿದರು "ಅಹಂ ಬ್ರಹ್ಮಾಸ್ಮಿ "ಎಂಬ ಮಹಾವಾಕ್ಯವು ಸತ್ಯವಿದ್ದ ಮೇಲೆ ..." ಹೀಗೇನೇ ಮತ್ತೆ ಮುಂದೆ ಆಡತಕ್ಕವನಿದ್ದೆ; ಅವರು ಗೊರಕೆ ಹೊಡೆಯುತ್ತಿದ್ದರಿಂದ ನನ್ನ ಮನಸ್ಸಿನಲ್ಲಿದ್ದದ್ದನ್ನೇ ನಾನು ನಾಲಿಗೆಯಿಂದಾಡುತ್ತಿದ್ದೆನೊ, ಇಲ್ಲವೂ ಎಂಬುದು ನನಗೇ ಕೇಳಿಸದಾಯಿತು. ಮುಂದೆ ನಾನು 'ಕಸಬರಿಗೆ —' ಎನ್ನುವದೊಂದೇ ತಡ ಒಮ್ಮಿಂದೊಮ್ಮೆ ಕಣ್ಣುಬಿಟ್ಟು ಅವರು "ಆಂ!" ಎಂದು ಕೇಳಿದರು. ಯಾಕಂದರೆ ಅವರಿಗೆ ಅದರ ಅರ್ಥವು ತಿಳಿಯಿತು

"ಕಸಬರಿಗೆ ? ಮುಂದೇನು ?" ಎಂದು ಅವರು ಉತ್ಸುಕತೆಯಿಂದ ಕೇಳಿದರು. "ಕಸಬರಿಗೆ" ಎಂದಕೂಡಲೇ ಅವರಿಗೆ ಅಪ್ಸರೆಯರು ಬಂದು ಚಾಮರ ಬೀಸಿದಂತಾಗಿರಬೇಕು.

"ಕಸಬರಿಗೆಯನ್ನು ನೋಡಿದರೆ ನನಗೆ ದೇವರ ನೆನಪಾಗುತ್ತದೆ" ಎಂದು ನಾನೆಂದೆ.

"ಅದೇಕೆ ಸ್ವಾಮೀ ? ಕಸಬರಿಗೆ ಎಂದರೆ ಲಕ್ಷ್ಮಿ ಎಂದು ನಮ್ಮ ತಾಯಿ ಹೇಳುತ್ತಿದ್ದರು" ಎಂದು ಅವರೆಂದರು;

"ಲಕ್ಷ್ಮಿಯಿರಲಿ, ನಾರಾಯಣನಿರಲಿ, ಅದು. ದೇವರು, ಇಷ್ಟು ನಿಜ" ಎಂದು ನಾನೆಂದೆ

"ತಾವು ಬಲ್ಲವರಾಗಿರುವದರಿಂದ ಅದು ಹೇಗೆ ಎಂಬುದನ್ನು ದಯಮಾಡಿ ಹೇಳುವಿರಾ ?" ಎಂದವರೆಂದರು.

"ಅದನ್ನೇ ಹೇಳತಕ್ಕವನಿದ್ದೆ; ಗೊರಕೆ ಹೊಡೆಯಲಾರಂಭಿಸಿದಿರಿ" ಎಂದೆ.

"ಏನೇನೋ ನೀತಿ, ನೇತಿ, ಬುದ್ಧ, ಬ್ರಹ್ಮ ಎನ್ನಲು ಮೊದಲುಮಾಡಿದಿರಿ. ಪುರಾಣ ಪ್ರಾರಂಭವಾದೊಡನೆ ನಿದ್ದೆ ಇದೆಯಲ್ಲ?" ಎಂದರು.

"ಬುದ್ಧ, ಬ್ರಹ್ಮ ತಿಳಿಯದಿದ್ದರೆ ಕಸಬರಿಗೆಯ ಮಾಹಾತ್ಮ್ಯವಾದರೂ ತಮಗೆ ತಿಳಿಯುವದು ಹೇಗೆ ? ಕಸಬರಿಗೆ ಎಂದರೆ ಕಡಿಮೆ ಎಂದು ತಿಳಿದಿರಾ ? ಬುದ್ಧ-ಬ್ರಹ್ಮರ ಪರಿಚಯವಿಲ್ಲೆಂದು ತಿರಸ್ಕಾರ, ಕಸಬರಿಗೆಯ ಅತಿಪರಿಚಯವಾಯಿತೆಂದು ಅವಜ್ಞೆಯೇ! ಹಳೇ ಪತ್ರೋಳಿ" "ಹರಕು ಮೊಚ್ಚಿ" ಗಳ ಸಾಲಿಯಲ್ಲಿಯೇ ಕಸಬರಿಗೆಯನ್ನು ಗಯ್ಯಾಳಿಯ ಬಾಯಿಯು ಪೋಣಿಸಿದರೆ ಏನಾಯಿತು ? – ಸೋಹಂಕಾರಿಗಳ ಬಾಯಲ್ಲಿ ಬ್ರಹ್ಮದ ಗತಿಯೂ ಹಾಗೆಯೇ ಆಗಿದೆ. ಹುಲ್ಲಿನಿಂದಾಗುವದು ಎಂದು ಕಸಬರಿಗೆಯು ಹುಲ್ಲಿಗಿಂತಲೂ ಕ್ಷುಲ್ಲಕವಾಯಿತೇ ? ಕಸ ಬಳಿಯುವದರಿಂದ ಕಸಕ್ಕಿಂತ ಕಡೆಯಾಯಿತೇ ? ಮೂಲೆಯಲ್ಲಿರುವದರಿಂದ ಮೂಲೆಗುಂಪಾದಂತಾಯಿತೇ ? ಕಸಬರಿಗೆ ! ಮಹಾತ್ಮರಿಗೆ ಗಾಳಿ ಬೀಸುವ ನೆವದಿಂದ ಅವರನ್ನು ಸಾರವಮಾಡಿ ತನ್ನನ್ನೇ ಮರೆಯಿಸಿಕೊಳ್ಳುವ ಚವರಿಯನ್ನು ನೀವಾಳಿಸಬೇಕು. ಈ ಕಸಬರಿಗೆಯ ಮೇಲಿಂದ ! "ಜಗತ್ತಿನ ಹೊಲಸನ್ನು ಗೂಡಿಸಿ ಕಸದ ಮೂಲೆಯಲ್ಲಿಯೂ ಏಕಾಕಿಯಾಗಿ ಕುಳಿತುಬಿಡುವ ಅವಧೂತನೇ, ನಮೋ ನಮೋ !" ಹೀಗೆಂದು ಸಾಷ್ಟಾಂಗವೆರಗಿದರೆ ತಪ್ಪೇ ಕಸಬರಿಗೆಯ ಮುಂದೆ?" ಈಗ ಮಾತ್ರ ನನ್ನ ಮಿತ್ರರು ಆಕಳಿಸಲಿಲ್ಲ, ತೂಕಡಿಸಲಿಲ್ಲ, ನಿದ್ದೆಯಿಲ್ಲ, ಗೊರಕೆಯಿಲ್ಲ

"ಸ್ವಾಮೀ, ಕಸಬರಿಗೆಯೇ ಬ್ರಹ್ಮನ ಅಪ್ಪನಾಗಿಬಿಟ್ಟಿತಲ್ಲ !" ಎಂದರು.

“ ಅಪ್ಪನೇನು ? ಅವ್ವನೇನು ? ಸರ್ವಂ ಖಲ್ವಿದಂ ಬ್ರಹ್ಮಂ ! ಎಲ್ಲವೂ ಬ್ರಹ್ಮ ! ” ಎಂದೆ.

“ ಈ ಕಸಬರಿಗೆಯೂ ಬುದ್ಧನೂ ಅಹುದೇನು ? ” ಎಂದು ಕೇಳಿದರು.

“ ಅಯ್ಯೊ ! ಬುದ್ಧನೇ ! ಭಾರತದ ಕಸಗೂಡಿಸಿ ತಾನು ಮೂರೆಗುಂಪಾದ ದೇವ ! ಅಯ್ಯೊ, ಬುದ್ಧದೇವನನ್ನು ಕಸಬರಿಗೆ ಮಾಡಿಬಿಟ್ಟರುವಿರಿ ! ಕಸಬರಿಗೆಯನ್ನಾದರೂ ಬುದ್ಧದೇವನನ್ನಾಗಿ ಮಾಡಿಕೊಳ್ಳಿ ! ” ಎಂದು ನಾನೆಂದೆ



# ಉಗುಳುವದು ～ ～ ～ ～

**ವಿಷಯ ಪ್ರವೇಶ:—** ಓದುವಣ್ಣಗಳಿರಾ, ಛೀ ಇವೇನು ಮಹಾ ವಿಷಯ ಎಂದು ಈ ಪುಟಗಳನ್ನು ಉಗುಳು ಹಚ್ಚಿ ತಿರುವಿ ಹಾಕಿ ಮುಂದೆ ಸಾಗಬೇಡಿರಿ. ಇದೆಲ್ಲರ ಬಾಯೊಳಗಿನ ವಿಷಯ ಎಂದು ಅಲ್ಲಗಳೆಯಬೇಡಿರಿ. ಬಾಯೊಳಗಿನದಿದ್ದಷ್ಟಕ್ಕೆ ಎಲ್ಲರ ಕೈಯೊಳಗಿನದು ಎಂದು ಹೇಳಬರುವದಿಲ್ಲ ನಮ್ಮ ನಮ್ಮ ನಾಲಿಗೆ ನಮ್ಮ ನಮ್ಮ ಬಾಯೊಳಗಿದ್ದರೂ ನಮ್ಮ ನಮ್ಮ ಕೈಯೊಳಗಿದೆಯೇ ? ಹಾಗೆಯೆ—ಉಗುಳು

ಓಕಳಿಯಾಡುವ ಜೀಕಳಿಯಂತೆ, ಹಗಲು ಹನ್ನೆರಡು ತಿಂಗಳೂ ರಂಗಪಂಚಮಿಯನ್ನು ನೆರವೇರಿಸುವವರಂತೆ, ಪಿಚ್ಚಿ ಪಿಚ್ಚಿ ಎಲಿಗಳನ್ನು ನಿಮಿಷಾರ್ಧದಲ್ಲಿ ಅರೆದು ಅಗಿದು ಪಿಚಿಪಿಚಿ ಉಗುಳುವ ತಂಬುಲ ಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರಯಲು ಬಯಸುವದಿಲ್ಲ. ಅದು ಸಮಾಜ ಶಾಸ್ತ್ರದೊಳಗಿನ ಮಹಾ ವಿಷಯ. 'ಬೆಕೀ' ನಾಯಿಗಳಂತೆಯೂ ಮೋಸ ಗೊಳಿಸುವ ಫಿರಂಗಿಗಳಂತೆಯೂ ಲೊಳಲೊಳನೆ ಧಡಂಧುಡಂನೆ ಶಬ್ದದಿಂದ ಕಳ್ಳರನ್ನೂ ಹುಳ್ಳಿಗೆ ಮಾಡುವ ಸದೈವ-ಸಾವಧಾನಿಗಳಾದ ಉಗುಳು ಒಡಕರ ಬಗ್ಗೆಯೂ ಬರೆಯಲು ಇದು ಸ್ಥಳವಲ್ಲ. ಅದು ನಾಗರಿಕ - ಧರ್ಮ ಶಾಸ್ತ್ರದ ಭಾಗ.

ಆದರೂ ಮಹತ್ವದ ಈ ವಿಷಯದ ಬಗ್ಗೆ ನನ್ನ ಅಲ್ಪ ಮತಿಗೆ ತಿಳಿದಷ್ಟು ಬರೆಯುವದು ಕರ್ತವ್ಯವಾಗಿದೆ.

**ಉಗುಳುವದು ಮತ್ತು ಆರೋಗ್ಯಶಾಸ್ತ್ರ·—** ಮುಮುಕರು

ವೆಂದು. ಹೌದು, ದಾಟು ದಾಟುವದರಲ್ಲಿ ತಪ್ಪಿ ಅದರ ಮೇಲೆಯೆ ಕಾಲು ಬಿದ್ದರೆ, ರೋಗ ಅಂಟುವ ಸಂಭವ ಬಹಳ. ಯಾರ ಉಗುಳು ಹೇಗೋ ಯಾರು ಬಲ್ಲರು ? ಉಗುಳು ರೋಗದ ಉಗವು ! ಉಗುಳಿ ಉಗ್ಗುಳಿ ರೋಗ, ಬೊಗಳಿ ಬೊಗಳಿ ರಾಗ ಎಂದು ಜನಪದ ವೇದವಾಕ್ಯವಿಲ್ಲವೇ ! ರೋಗಿಯ ಉಗುಳಿನ ಬಗ್ಗೆ ಡಾಕ್ಟರರು ಎಚ್ಚರ ಪಡಲು ಹೇಳುವಷ್ಟು ತಾವು ಔಷಧರೂಪವಾಗಿ ಕೊಡುವ ವಿಷದ ಬಗ್ಗೆಯೂ ಹೇಳುವದಿಲ್ಲ ಉಗುಳು ಮನುಷ್ಯನಲ್ಲಿರುವ ಮಹಾಶಕ್ತಿ. ಅದನ್ನು ವಿಧಾಯಕ ಅಥವಾ ವಿಘಾತಕ ಮಾಡುವದು ನಮ್ಮ ವಿವೇಕ ಅವಿವೇಕಗಳನ್ನವಲಂಬಿಸಿರುವದು ಉಗುಳುವದು ಮನುಷ್ಯನ ಲಕ್ಷಣ.

**ಉಗುಳುವದು ಮತ್ತು ಮಾನವನ ಅನನ್ಯಸಾಮಾನ್ಯ ಲಕ್ಷಣ —**

ಮಾನವನ ಅನನ್ಯಸಾಮಾನ್ಯಲಕ್ಷಣವೇನು ಎಂಬುದರ ಬಗ್ಗೆ ಶಾಸ್ತ್ರಕಾರರು ಬಹಳೇ ಹೇಚಾಡಿರುವರು " ನಗುವವನು ಮನುಷ್ಯ " ಎಂದು ಲಕ್ಷಣ ಮಾಡಿದರೆ " ಹೈನಾ " ಎಂಬ ಪಶುವೂ ನಗುವದು, ರಾಜತಂತ್ರಜ್ಞರೂ ನಗುತ್ತಾರೆ—ಅದರಲ್ಲಿ ಮಾನವನ ಹೃದಯ ಕಂಡು ಬರುವದಿಲ್ಲ.—ಹೀಗಾಗಿ ಮೇಲಿನ ವ್ಯಾಖ್ಯೆಗೆ ಬಾಧೆ ಬರುತ್ತದೆ. ' ಮಾತಾಡುವವನು ಮನುಷ್ಯ ' ಎಂದರೆ ಪಂಡಿತಪಕ್ಷಿ (ಗಿಳಿ) ಯೂ ಮಾತಾಡುವದು, ಪಂಡಿತರೂ ಮಾತಾಡುವರು—ಅದರಲ್ಲಿ ಮಾನವನ ಬುದ್ಧಿ ಕಂಡು ಬರುವದಿಲ್ಲ - ಮತ್ತೆ ಬಾಧೆ ಬಂತು ' ಎರಡು ಕಾಲುಗಳುಳ್ಳ ಪ್ರಾಣಿ ಮನುಷ್ಯನು ' ಎಂದು ಹೇಳಬೇ ಕಂದರೆ ಕಾಗೆಗೂ ಎರಡು ಕಾಲು, ಗೂಗಗೂ ಎರಡು ಕಾಲು. "ತರ್ಕ ತಿಳುವಳಿಕೆಯುಳ್ಳವನೆ ಮನುಷ್ಯ " ಎನ್ನಬೇಕೇ ? ಕೆಲಕೆಲವು ನಾಯಿಗಳಿಗೆ ಇದ್ದಷ್ಟು ತರ್ಕ-ತಿಳುವಳಿಕೆ ಹಲಕೆಲವು ನಾಯಕರಿ ಗಿರುವದಿಲ್ಲ —ಅದರಲ್ಲಿ ರಂಗಭೂಮಿಯೊಳಗಿನವರೂ ಬಂದರು. ಹೊರಗಿನವರೂ ಬಂದರು ಹಾಗಾದರೆ, ಉಗುಳುವವನೇ ಮನುಷ್ಯ ಎಂದು ನಾನು ಸೂಚಿಸುತ್ತೇನೆ ತನ್ನ ಅರುಚಿ, ಅಸಮ್ಮತಿ, ಅಸಹ್ಯ

ಗಳನ್ನು ಅತಿ ತೀವ್ರವಾಗಿ, ಆದರೆ ತೀರ ಸಂಕ್ಷಿಪ್ತವಾಗಿ ವ್ಯಕ್ತಮಾಡುವ ಒಂದೇ ಒಂದು ಸಾಧನವೆಂದರೆ "ಉಗುಳುವದು." ಅದು ಮಾನವನಿಗೊಬ್ಬನಿಗೇ ಸಾಧ್ಯ. ಉಳಿದ ಪಶುಪಕ್ಷಿಗಳಿಗೆ ಸಾಧ್ಯವಿಲ್ಲ. ಅವಿವೇಕಿಗಳಿಗೆ ಬುದ್ಧಿಯುಂಟಾಗಬೇಕಾದರೆ ನಾಲ್ಕು ಜನರ ಕಡೆಯಿಂದ ಉಗುಳಿಸುವ ಉಪಾಯವನ್ನೇನೊ ಹೇಳುವರು. ಆದರೆ ತಕ್ಕ ಹೊತ್ತಿನಲ್ಲಿ ತಕ್ಕಮಟ್ಟಿಗೆ ತಕ್ಕುದಲ್ಲದ್ದರ ಬಗ್ಗೆ ತಕ್ಕರೀತಿಯಲ್ಲಿ ಉಗುಳುವ ಶಾಸ್ತ್ರವನ್ನೂ ಕಲೆಯನ್ನೂ ಬಲ್ಲವರು ಮಾನವರಲ್ಲಿಯೂ ಕಡಿಮೆ. ಕಂಡಕಂಡಲ್ಲಿ, ಸಿಕ್ಕಸಿಕ್ಕಹಾಗೆ, ಬೇಕುಬೇಕಾದಂತೆ ಉಗುಳುವವರೇ ಹೆಚ್ಚು. ಉಪಯೋಗಿಸಲಿಕ್ಕೆ ಬಂದವರೆಲ್ಲರಿಗೂ ಹಠಯೋಗ ಬಂದೇ ಬರುವದೆಂದಲ್ಲ. ಅಂತೆಯೇ ಜಗತ್ತಿನಲ್ಲಿ ಆಗಬೇಕಾದಷ್ಟು ಸುಧಾರಣೆಯಾಗಲೊಲ್ಲದು.

**ಉಗುಳುವದು ಮತ್ತು ನಾಟ್ಯ ಕಲೆ**—ನಮಗೆ ನೆಟ್ಟಗೆ ಉಗಳಲಿಕ್ಕೆ ಬರುವದಿಲ್ಲವಾದ್ದರಿಂದಲೇ ನಾಟ್ಯಕಲೆಯಲ್ಲಿ ತಿದ್ದುಪಡೆಯಾಗಿಲ್ಲ. ನಾಟಕಗೃಹಗಳಲ್ಲಿ 'Don't Spit' "ಉಗಳಬಾರದು" ಎಂದು ಬರೆದುದನ್ನು ವಾಚಕರು ಓದಿರಬಹುದು. ಇನ್ನು ಉಗುಳಿಸಿಕೊಳ್ಳುವಂಥ ಅನೇಕ ಪ್ರಸಂಗಗಳು ತಮ್ಮ ನಾಟಕದಲ್ಲಿಯೂ ಅಭಿನಯಾದಿಗಳಲ್ಲಿಯೂ ಇರುವವೆಂಬ ಭೀತಿಯಿಂದಲೂ ಮುಂಜಾಗ್ರತೆಯಿಂದಲೂ ನಾಟಕದವರು ಹಾಗೆ ಬರೆಯಿಸಿರುವದೇನೋ ಅವರಿಗೆ ಹಿತ. ಆದರೆ ನೋಡುವವರಿಗೆ ಇಂದಿಲ್ಲ ನಾಳೆ ಹಿತವಾಗಬೇಕಾದರೆ "ಉಗುಳಬೇಕಾದಲ್ಲಿ ಉಗುಳತಕ್ಕವರೇ" ಎಂದು ನೋಡುವವರು ನಾಟಕೀಯ ಕಾಯಿದೆ-ಭಂಗವನ್ನು ಸವಿನಯವಾಗಿ ಮಾಡಲಿಕ್ಕೆ ಬೇಕು. ಇಷ್ಟಾಗಿ, ನಾವು ನಾಟಕಗೃಹಗಳಲ್ಲಿ ಉಗುಳುವದನ್ನು ಬಿಟ್ಟಿರುವೆವೋ? ಅದೂ ಇಲ್ಲ, ತೆಳಗೆ ಉಗುಳುತ್ತೇವೆ—ತೆಳಗೆ. ಇದು ಉಗುಳುವದರ ಅಧಃಪಾತವೇ ಸೈ. ನೆಟ್ಟಗೆ ಉಗುಳಿದರೆ ಆಡುವವರಿಗೆ ಹಿತ, ನೋಡುವವರಿಗೂ ಹಿತ; ಇಂಥ ಕಾಲಕ್ಕೆ ಉಗುಳು ನುಂಗಿ ಸುಮ್ಮನೆ ಕೂಡುವದರಲ್ಲಿ ಅರ್ಥವಿಲ್ಲ. "ಉಗುಳು ನುಂಗಿದರೆ ಹೊಟ್ಟೆ ತುಂಬುವದೇ?" ಎಂದು ಕೇಳುವರು. ನೋಡುವವರು ಉಗುಳು ನುಂಗಿಕೊಂಡಿರದಿದ್ದರೆ ಆಡುವವರ ಹೊಟ್ಟೆ ತುಂಬುತ್ತಿತ್ತೇ? ಮತ್ತು

ಮತ್ತಲು ನೋಡಲು ಜನರು ಕುಳಿತಿರುವಾಗ ಉಗುಳುವದು ಹೇಗೆ? ಎಂದು ಯಾರಾದರೂ ಕೇಳಬಹುದು. ಇದು ಸಮಂಜಸವಾದ ಪ್ರಶ್ನೆ ಆದರೆ ಇದಕ್ಕೆ ಉತ್ತರರೂಪವಾಗಿ ಇನ್ನೊಂದು ಲೇಖವನ್ನೇ ಬರೆಯ ಬೇಕಾದೀತು. ಮಹಾ-ನಾಟ್ಯಕವಿ ಶೆಕ್ಸಪಿಯರನು ಉಗುಳಿನ ಬಗ್ಗೆ ಒರೆದು ನಾಟಕವನ್ನೇ ಬರೆದಿದ್ದಾನೆ. "ಅದಾವ ನಾಟಕ ?" ಎನ್ನು ವಿರಾ ? Merchant of Venice "ಸುರತನಗರದ ಶ್ರೇಷ್ಠಿ !" ಅದು. ಅಂಟೋನಿಯೊ ಬೇಸಾನಿಯೋ ಇಬ್ಬರು ಜೀವದ ಗೆಳೆಯರು, ಒಬ್ಬರೊಬ್ಬರು ಹಾಕಿದ ಉಗುಳು ದಾಟುತ್ತಿರಲಿಲ್ಲ ಇವರಿಬ್ಬರೂ ಒಮ್ಮೆ ಶಾಯಲಾಕ್‌ನ ಮೋರೆಯ ಮೇಲೆ ಉಗುಳಿದರು— ಅವನು ಬಹಳ ನಿರ್ದಯನಾದ ಸಾಹುಕಾರಿಕೆಯ ಬಡ್ಡಿಯವನು ಎಂದು. ಇದೇ ಅಂಟೋನಿಯೋನ ಜೀವಕ್ಕೆ ಮೂಲವಾಯಿತು ಶಾಯಲಾಕ್‌ನ ಒಳಗಿಂದೊಳಗೆ ಕಿಡಿಯುಗುಳಿದನು, ಬೆಂಕಿ ಕಾರಿದನು ಮುಂದೆ ಇವನ ಹತ್ತರನೇ ಅವರಿಗೆ ಅಂಟೋನಿಯೋನ ಜೀವ ಒತ್ತೆಯಿಟ್ಟು ಲಕ್ಷಾವಧಿ ಹಣ ತರಬೇಕಾಯಿತು ಅವಧಿಯೊಳಗೆ ಹಣಕೊಡುವ ದಾಗದಿದ್ದುದರಿಂದ ಜೀವ ಕಳಕೊಳ್ಳುವ ಹೊತ್ತು ಬಂತು. ನ್ಯಾಯಕನೂ ಪೋರ್ಶಿಯಾ ಇವಳೂ ಶಾಯಲಾಕ್‌ನನ್ನು ಹೊಗಳಿ ನೆರೆ ಡಿದರು ಗ್ರ್ಯಾಶೀಯಾನೋನು ಬೈಗಳಿ ನೋಡಿದನು ಆದರೆ ಕಾಯಿದೆ ಪುಸ್ತಕ ಗಳಮೇಲೆ ಸ್ವಲ್ಪ ಉಗುಳು ಹೆಚ್ಚುಮಾಡಿದ ಬೆಲೆಂಯೆನ ಪಂಡಿತನ ಸೂಚನೆಯ ಮೇರೆಗ ಅಂಟೋನಿಯೋನು ಉಳಿದುಕೊಂಡನು. ಏನೋಂ ಯಮರಾಜನು ಅರೆನುಂಗಿದ ತುತ್ತನ್ನು ಉಗಳಿದನು ಉಗುಳುವದ ರಲ್ಲಿ ತಪ್ಪಾಗಿದ್ದರಿಂದಲೇ ಆ ಅನಾಹುತವಾಯಿತು ಆದರೆ ವ್ಹೆನಿಸ್ ನಗರದವರೆಲ್ಲರೂ ಹೊತ್ತಿಗೇ ಎಚ್ಚತ್ತು ನಾಲ್ಕು ಜನರು ಶಾಯಲಾಕ ನಿಗೆ ನೆಟ್ಟಗೆ ಉಗುಳಿದ್ದರೆ ಈ ಗಂಡಾಂತರವೇ ಬರುತ್ತಿ-ರಲಿಲ್ಲ.

**ಉಗುಳುವದು ಮತ್ತು ರಾಜಕೀಯ ಚಳವಳಿಯು —** ಉಗುಳುವದು ಮಾನವನ ಹಕ್ಕು— ಜನ್ಮಸಿದ್ಧ ಹಕ್ಕು— ಈಗ ವಿಷ್ಣೋ ಜನರು ನಿಷೇಧ-ಸಭೆಗಳಲ್ಲಿ ವ್ಯರ್ಥ ಉಸುರುಗಳೆಯುಕೊಳ್ಳುವರು ಹಾಗೆ

ಮಾಡದೆ ಉಗುಳುವ ತಮ್ಮ ಜನ್ಮಸಿದ್ಧ ಹಕ್ಕನ್ನು ಉಪಯೋಗಿಸಿದರೆ ಎಷ್ಟೋ ಆಯಾಸವು ಕಡಿಮೆಯಾಗುವದು ಉಗುಳುವಂಥ ತೀವ್ರ ನಿಷೇಧವು ಬೇರೆಯಾವುದೂ ಇಲ್ಲ ಅದು ಬುದ್ಧಿ ಕಳೆದುಕೊಂಡವರಲ್ಲಿ ಶುದ್ಧಿಯನ್ನುಂಟುಮಾಡುವದು. ಉಗುಳು ಪವಿತ್ರ ಉಗುಳುವದು ಅಶುದ್ಧವೆಂದು ನೀರಮುಡಿಯವರು ಹೇಳುತ್ತಾರು, ಅದು ಶುದ್ಧ ತಪ್ಪು. ಉಗುಳು ಸ್ವಧೈವ ನಿರ್ಮಲ ರೀತಿಯಲ್ಲಿ ತಪ್ಪಿದರೆ ಮಾತ್ರ ಹೋಯಿತು. ನಮಗೆ ಬೇಡ ದಪ್ಪರ ಮೇಲೆ ಬರಿ ಉಗುಳುವದರಿಂದ ನಿಷೇಧದ ಕಾರ್ಯವು ತೀರಿಹೋಗುವದು ಆದರೆ ಉಗುಳುವದು ಮಹಾಶಕ್ತಿ ಎಲ್ಲರಿಗೂ ತಕ್ಕರೀತಿಯಲ್ಲಿ ಉಪಯೋಗಿಸಲು ಬರದು. ಈ ಕಲಿಯುಗವು ಹೋಗಿ ಮತ್ತೆ ಸತ್ಯಯುಗವು ಬರುವಾಗ ಎಲ್ಲರಿಗೂ ಈ ಅಧಿಕಾರವನ್ನು ಉಪಯೋಗಿಸುವ ಬುದ್ಧಿಯು ಬರುವಂತೆ ತೋರುತ್ತದೆ.

ಸ್ವಭಾವಭೇದದಿಂದ ಉಗುಳುವ ಸಂಸ್ಕೃತಿಯಲ್ಲಿಯೂ ಭೇದ ವುಂಟಾಗುವದು ತಾಮಸಿಯು 'ಖ್ಯಾಕ್' ಎಂದುಗುಳುವನು. ರಾಜ ಸನು "ಥೂ" ಎನ್ನುವನು ಸಾತ್ವಿಕನು ಮಾತ್ರ "ಚಿಃ" ಎಂದು ಕನ್ನಡ ಕಾವ್ಯಗಳಲ್ಲಿರುವಂತೆ ಸೂಕ್ಷ್ಮವಾಗಿ ತನ್ನ ತಿರಸ್ಕಾರವನ್ನು ವ್ಯಕ್ತಗೊಳಿಸುವನು

**ಉಪಸಂಹಾರ: —** ವೇದಕ್ಕೂ ಉಗುಳಿಗೂ ಏನಾದರೂ ಸಂಬಂಧವಿದೆಯೇ ? ಎಂದು ಕೆಲವರು (ನನ್ನ ವಿಷಯದ ಮಹತ್ವ ತಿಳಿಯದೆ ಇದ್ದವರು) ಚೇಷ್ಟೆಯಿಂದ ಕೇಳಬಹುದು. "ಮಹಾಸ್ವಾಮೀ ಇಲ್ಲದೆ ಇಲ್ಲ" ಎಂದು ನಾನು ಹೇಳುತ್ತೇನೆ ಆದರೆ ಅದನ್ನು ವರ್ಣಿಸುವ ಶಕ್ತಿಯು ಈ ಪಾಮರನಿಗಿಲ್ಲ. 'ಮಂತ್ರಗಳಿಗಿಂತ ಉಗುಳೇ ಬಹಳ' ಎಂದೆನ್ನುವ ನಾಸ್ತಿಕರು ಎಂದುಕೊಳ್ಳಲಿ. ವೇದ ಮಂತ್ರಗಳನ್ನುಚ್ಚರಿಸುವಾಗ ಹಾರುವ ಆ **ಬ್ರಹ್ಮಬಿಂದುಗಳ** ಮಹಿಮೆಯು ನಕ್ಷತ್ರಗಳಿಗೂ ಬಾರದು. ವೇದಗಳ ಅರ್ಥವನ್ನು ಇತಿಹಾಸ ಪುರಾಣಗಳು ಹೇಳುವವು. ಅವುಗಳ ಅರ್ಥವನ್ನು ಶರಣರು, ದಾಸರು ತಮ್ಮ ವಚನಗಳಲ್ಲಿಯೂ ಕೀರ್ತನೆಗಳಲ್ಲಿಯೂ ಹೇಳಿದರು. ಇಂಥ ಕೀರ್ತನೆಗಳಲ್ಲಿಯೂ

ಒಂದನ್ನು ಹಾಡುತ್ತ ಪುರಂದರದಾಸರು ಓಣಿಹಿಡಿದು ಬರುತ್ತಿರುವಾಗ ಭಿಕ್ಷೆ ಹಾಕಬಾರದೆಂಬ ಕ್ಷುದ್ರಬುದ್ಧಿಯಿಂದಲೋ ಏನೋ ಒಬ್ಬಳು ಕದವನ್ನು ಮುಚ್ಚಿಕೊಳ್ಳಲು ಅವರು ಉಸುರಿದ್ದೇನಂದರೆ.—

‘ಭಾರತ ರಾಮಾಯಣ ಪಂಚರಾತ್ರಾಗಮ ।
ಸಾರತತ್ವದ ಬಿಂದು—ಒಳಗೆ ಬಿದ್ದೀತೆಂದು ।
ಗಯ್ಯಾಳಿ ಮೂಳೀ ಕದವನಿಕ್ಕಿದಾಳಿವ ಕೇಳೇ’

ಆದಿಕವಿ ವಾಲ್ಮೀಕಿಯು ಕ್ರೌಂಚಮಿಥುನರಲ್ಲೊಂದರ ಮರಣ ಕಂಡು ಹಾಡಲಿಲ್ಲವೇ? ಹಾಗೆ ಇದು ಹಾಡಿನ ಉಗುಳಿನ ಬಿಂದುವೊಂದು ಸಿಡಿದು ಮನೆಯೇ ಪವಿತ್ರವಾಗಬಹುದಾಗಿತ್ತು. ಗಯ್ಯಾಳಿ ಮೂಳ ಕದವನಿಕ್ಕಿಕೊಂಡಳು. ಮಹಾತ್ಮರ ಮಾತಿನುಗುಳು ಸಿಡಿದು ಮನವೇ ಪವಿತ್ರವಾದೀತೆಂದು ಕಿವಿಮುಚ್ಚಿಕೊಳ್ಳುವ ಪಂಡಿತರಿಲ್ಲವೇ ಈಗ? ಮಹಾತ್ಮರು “ಛೀ” ಎಂದು ಉಗುಳಿದರೆ ಸಾಕು—ಆ ಅಹಿಂಸಾಯುಧವೇ ಪೃಥ್ವಿಯನ್ನೆಲ್ಲ ತನ್ನ ತೆಕ್ಕೆಯಲ್ಲಿರಿಸಿಕೊಳ್ಳಬೇಕೆಂಬ ವೃತ್ರಾಸುರನಿಗೆ ಇಂದ್ರನ ವಜ್ರಾಯುಧದಂತಿದೆ



# ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯ

## All World Perpetual Rain Calender

**ಓದಿರಿ! ಮಳೆಯ ಭವಿಷ್ಯ!! ಸಮಾಧಾನ ಪಡೆಯಿರಿ!!!**



**ಭವಿಷ್ಯ ಬರೆಯುವ ಹುಚ್ಚು:—** ಇತ್ತೀಚೆ ಜನರಿಗೆ ಎಲ್ಲದರ ಭವಿಷ್ಯ ಬರೆಯುವ ಹುಚ್ಚು ಹಿಡಿದಿದೆ. ಒಲ್ಲವರು ಬಲ್ಲಂತೆ ಬರೆದರೂ ಬರೆಯಲಿ; ಆದರೆ ಸಿಕ್ಕವರು ಸಿಕ್ಕಂತೆ ಬರೆಯುವದಾಗಲಿ, ಬೇಕಾದವರು ಬೇಕಾದಂತೆ ಬರೆಯುವದಾಗಲಿ ನಮಗೆ ಒಂದಿಷ್ಟೂ ಸರಿಬರುವದಿಲ್ಲ. ಹನ್ನೆರಡು ರಾಶಿಗಳ ಹೆಸರುಗಳನ್ನು ಕೂಡ ಹೇಳಲು ಬಾರದವರು ಜಗತ್ತಿನ ಭವಿಷ್ಯವನ್ನು ಸಾರಲು ಮುಂದೆ ಬರುತ್ತಿದ್ದಾರೆ! ಸಾರುವ ಅಯ್ಯನವರಿಗೂ ಇವರಿಗೂ ಏನು ಭೇದ? ಚೇಳಿನ ಮಂತ್ರ ಕೂಡ ಗೊತ್ತಿಲ್ಲದೆ ಹಾವಿನ ಗುದ್ದಿನಲ್ಲಿ ಕೈ ಹಾಕುವ ಜನರು ಈ ಕಲಿಯುಗದಲ್ಲಿ ಬಹಳಾಗಿದ್ದಾರೆ. ಇದಕ್ಕೆ ಒಂದೇ ಉಪಾಯವೆಂದರೆ ನಮ್ಮಂಥ ಅನುಭವಿಕರು ಲೋಕೋಪಕಾರಕ್ಕಾಗಿ ಬರೆದು ಜನರ ಅಜ್ಞಾನವನ್ನು ದೂರಮಾಡಬೇಕು. ಮತ್ತು ಸುಳ್ಳು ಭವಿಷ್ಯ ಸಾರುವ ಅರಣ್ಯ-ಪಂಡಿತರ ಅಡವಿಯನ್ನು ತುಂಡುಮಾಡಬೇಕು.

**ಮಳೆಯ ಭವಿಷ್ಯ:—** ವರ್ಷವರ್ಷವೂ ಪ್ರಕಟವಾಗುವ ಅನೇಕ ಮಳೆಯ ಭವಿಷ್ಯಗಳನ್ನು ಓದಿ, ಅದರ ಹುಚ್ಚುಚ್ಚು ನೋಡಿ, ಸಿಟ್ಟಿಗೆದ್ದು ನಮಗೆ ಗವು. ಕುಚಿದಂತಾಗಿ ಬೆವರುಬಂದು ಕೊನೆಗೆ

ನಾವೇ ತಣ್ಣಗಾಗಿದ್ದೇವೆ. ಅನೇಕ ಒಕ್ಕಲಿಗರು ಈ ಭವಿಷ್ಯಗಳಿಗಾಗಿ ಬಾಯಿಬಿಟ್ಟು ಮಳೆಬರದ್ದನ್ನು ಕೊನೆಗೆ ಕಂಡು ಕಣ್ಣೀರು ಸುರಿಸಿದ್ದಾರೆ. ಮಳೆಯ ಭವಿಷ್ಯಗಳಿಗೂ ನೀರಿಗೂ ಏನಾದರೂ ಸಂಬಂಧವಿದ್ದರೆ ಅದಿಷ್ಟೆ ! ನೊನ್ನೆ, ನಮ್ಮೂರ ದೊಡ್ಡ ಧಣೇರು ಮತ್ತೊಮ್ಮೆ ಮಳೆಯ ಭವಿಷ್ಯ ಓದುವದಿಲ್ಲೆಂದು ನೀರು ಬಿಡುವವರಿದ್ದರು. "ಸುಳ್ಳೇ ನೀರು ದಂಡ, ಅಷ್ಟಾದರೂ ನೀರು ಯಾಕೆ ಹಾಳುಮಾಡಿಕೊಳ್ಳುತ್ತೀರಿ, ನಮ್ಮ ವರ್ಷಾಭವಿಷ್ಯವನ್ನಷ್ಟು ಓದಿದ ಮೇಲೆ ಏನು ಮಾಡುವದನ್ನು ಮಾಡಿರಿ" ಎಂದು ಅವರ ಕೈ ತಡೆದೆವು. ಅವರಿಗೆ ನಮ್ಮ "ಸಾರ್ವಭೌಮ ನಿರಂತರ-ವರ್ಷಾ-ಭವಿಷ್ಯ" ವನ್ನು ಕೊಟ್ಟೆವು. ಅದನ್ನು ನೋಡನೋಡು ತ್ತಿರುವಾಗಲೆ ಅವರ ಕಣ್ಣೊಳಗಿಂದ ದಳದಳನೆ ಆನಂದ ಬಾಷ್ಪಗಳು ದುರಿದವು. ಮಳೆಗೆ ಬೇರೆ ಶುಭ ಶಕುನವೇನು ಬೇಕು ? ಧಣೇರು ಆನಂದ ಸಮಾಧಿಯೊಳಗಿಂದೆಚ್ಚತ್ತ ಮೇಲೆ ಕಣಿ ಹೇಳುವವರಂತೆ ಅವರ ಬಾಯೊಳಗಿಂದ ಈ ಶಬ್ದಗಳು ಬಂದವು "ಮಳೆ ಬೀಳುವದು ಬಿಡು ವದು ದೇವರ ಕೈಯೊಳಗಿನ ಮಾತು. ಶಾಸ್ತ್ರಿಗಳ ಮಳೆಯ ಭವಿಷ್ಯ ಮಾತ್ರ ಕಲ್ಪಾಂತಕಾಲಕ್ಕೂ ಸುಳ್ಳಾಗದು." ನಮ್ಮ 'ನಿರಂತರ-ವರ್ಷಾ-ಭವಿಷ್ಯ' ದ ಬಗ್ಗೆ ಇದಕ್ಕೂ ಹೆಚ್ಚಿನ ಸಿಫಾರಸು ಪತ್ರ ಯಾವುದಿರ ಬಹುದು ? ಮುಂದಿಯ ಒತ್ತಾಯಕ್ಕಾಗಿ ಬರೆದ ನೂರು ಅಭಿಪ್ರಾಯ ಗಳಿಗಿಂತ ತಾವಾಗಿ ಬರೆದ ಒಂದು ಅಭಿಪ್ರಾಯವೂ ಮೇಲು !

**ಸಾರ್ವಭೌಮ–ನಿರಂತರ–ವರ್ಷಾ–ಭವಿಷ್ಯ:—** ಇದನ್ನು ಶೋಧ ಮಾಡಲು ನಾವು ಮಾಡಿದ ತಪಸ್ಸು ದೇವರಿಗೆ ಗೊತ್ತು, ನಮಗೆ ಗೊತ್ತು. ಅದನ್ನು ಬಾಯಿಬಿಟ್ಟು ಬಣ್ಣಿಸಿ ಫಲವಿಲ್ಲ. ಈ ಭವಿಷ್ಯದ ಸಹಾಯದಿಂದ ಕಲ್ಪ, ಮನ್ವಂತರ, ಯುಗ, ಸಂವತ್ಸರ, ಋತು, ಮಾಸ, ಪಕ್ಷಗಳ ಯಾವ ಭೇದವನ್ನೆಣಿಸದೆ ಮಳೆಯ ತಿಥಿಗಳು ತಿಳಿಯುವವು. ಇಷ್ಟೇ ಅಲ್ಲ, ವಿಜಾಪುರ ಜಿಲ್ಹೆ–ವಿಂಧ್ಯಪರ್ವತ, ಹಿಮಾಲಯ–ಹಿಂದು ಸ್ಥಾನ,ನೀಲಗಿರಿ–ನೈಲನದಿ, ಉತ್ತರಧ್ರುವ–ದಕ್ಷಿಣ ಅಮೇರಿಕಾ, ಸಹರಾ ಮತ್ತು ಸೊಲ್ಲಾಪೂರ ಇಂಥ ಭಿನ್ನ ಪ್ರದೇಶಗಳಲ್ಲಿ ಕೂಡ ಮಳೆ

ಯಾಗುವ ತಿಥಿಗಳನ್ನು ಇದು ತಿಳಿಸುವದು. ಇಂಥ ವ್ಯಾಪಕ ಭವಿಷ್ಯದಲ್ಲಿ ಒಂದೆರಡು ತಿಥಿಗಳು ಹೆಚ್ಚುಕಡಿಮೆ ಬಂದರೆ ಅದನ್ನು ಯಾರೂ ತಡೆದು ಕೊಳ್ಳಬಹುದು. ಒಂದು ವರ್ಷ ಹೇಳಿದ ಮಳೆಗಳು ಇನ್ನೊಂದು ವರ್ಷ ಬಿದ್ದದ್ದನ್ನು ನಾವು ನೋಡಿದ್ದೇವೆ. ಅಂಥ ಕೀಳು ಭವಿಷ್ಯವೇನೂ ನಮ್ಮದಲ್ಲ.

**ಈ ಭವಿಷ್ಯವನ್ನು ಉಪಯೋಗಿಸುವ ರೀತಿ :—** ಬಡಬಗ್ಗರಿಗೆ ಕೂಡ ಇದರ ಉಪಯೋಗವಾಗಬೇಕೆಂದು, ಈ ವರ್ಷಾ-ಭವಿಷ್ಯ-ಯಂತ್ರವನ್ನು ವಿಶೇಷರೀತಿಯಿಂದ ಮುದ್ರಿಸಿದ್ದೇವೆ. ಇದನ್ನು ಹರಕೊಂಡು ತಮಗೆ ಬೇಕಾದಲ್ಲಿಯಾದರೂ ಅಂಟಿಸಿಕೊಳ್ಳಬಹುದು. ಉತ್ಸನ್ನದಾರರಾದ ಶ್ರೀಮಂತರು ಇದನ್ನು ಬಂಗಾರ, ಬೆಳ್ಳಿ ತಗುಡುಗಳಿಗೆ ಅಂಟಿಸಿ ದೇವರ ಮನೆಯಲ್ಲಿ ಇಡಬಹುದು. ಸಾಮಾನ್ಯಜನರು ಪುಕ್ಕಟೆ ಸಿಗುವ ಯಾವ ಕ್ಯಾಲೆಂಡರಿಗೂ ಇದನ್ನು ಹಚ್ಚಬೇಕು ಆದರೆ ಇದರ ಉಪಯೋಗವು ತಲೆತಲಾಂತರವಾಗುವದಿರುವದರಿಂದ ಯಾವದಾದರೂ ಅಖಂಡ ಕ್ಯಾರಂಡರಿಗೆ ಹಚ್ಚುವದೊಳಿತು. ಅವೂ ಪುಕ್ಕಟೆ ಸಿಗುವವು. ಇಷ್ಟೂ ಗತಿಯಿಲ್ಲದ ದರಿದ್ರರು 'ಪ್ರ-ಚ-ಸ-ದ-ತ್ರ' ಎಂಬ ಮಂತ್ರವನ್ನು ಪಾರ ಮಾಡಬೇಕು ಈ ಮಂತ್ರದ ಉಪಯೋಗ ಹೇಗೆ ಮಾಡಬೇಕು ಇದನ್ನು ಕೆಳಗೆ ಬರೆಯಲಾಗುವದು.

**'ಪ್ರ-ಚ-ಸ-ದ-ತ್ರ' ಎಂಬ ಪಂಚಾಕ್ಷರೀ ಮಂತ್ರ —** "ಯಾವಾಗ್ಗೆ ಮಳೆಯಾದೀತು" ಎಂದು ಯಾವ ದೇಶದವರೂ ಯಾವ ಕಾಲಕ್ಕೂ ಕೇಳಿದರೂ ನಿರ್ಭಯವಾಗಿ ಹೇಳಿರಿ ಈ ಪಂಚಾಕ್ಷರೀ ಮಂತ್ರವನ್ನು— "ಪ್ರ-ಚ-ಸ-ದ-ತ್ರ, ಪ್ರ-ಚ-ಸ-ದ-ತ್ರ" ಎಂದು. ಇದಕ್ಕೂ ನಿಜವಾದ ಮಳೆಯ ಭವಿಷ್ಯವೆ ಇಲ್ಲ. ಪ್ರ ಎಂದರೆ ಪ್ರತಿಪದೆ; ಚ ಎಂದರೆ ಚತುರ್ಥಿ; ಸ ಎಂದರೆ ಸಪ್ತಮಿ, ದ ಎಂದರೆ ದಶಮಿ; ತ್ರ ತ್ರಯೋದಶಿ" ಎಂದು ಹೇಳಿದವರೆ "ಇನ್ನೇನು ಒಂದೆರಡು ತಿಥಿ ಹಿಂದೆ ಮುಂದಾಗಬಹುದು. ಯಾಕೆಂದರೆ ಇದು ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯ" ಎಂದು ಕೊನೆಗೆ ಹೇಳುವದನ್ನು ಮರೆಯಬೇಡಿರಿ.

**ನಮ್ಮ ವರ್ಷಾ-ಭವಿಷ್ಯ-ಯಂತ್ರದ ಹೆಚ್ಚಿನ ಗುಣವೇನು?-** ಮಳೆಯು ಯಾರಪ್ಪನ ಮನೆಯ ಗಂಟೂ ಅಲ್ಲ. ಮಳೆಗೆ ಮಳೆಯೂ ಇಲ್ಲ ಭವಿಷ್ಯಕ್ಕೆ ಭವಿಷ್ಯವೂ ಸುಳ್ಳು–ಹೀಗೆ ಎರಡು ನಿರಾಶೆಗಳನ್ನು ತಪ್ಪಿಸಲು ಇದೇ ಮಹಾಶಕ್ತಿಯಾಗಿದೆ. ನಮ್ಮ ಮಳೆಯ ಭವಿಷ್ಯವು ಸುಳ್ಳಾದ ಬಗ್ಗೆ ಇನ್ನೂ ಯಾರೂ ನಮಗೆ ಬರೆದು ತಿಳಿಸಿಲ್ಲ. ಇಷ್ಟೇಕೆ? ಕರ್ನಾಟಕದ ಮಳೆಯ ಭವಿಷ್ಯವನ್ನು ನಾವು ಹೋದ ವರ್ಷ ಮಾಡಿದಾಗ್ಗೆ ಒಂದಿಲ್ಲ ಒಂದು ಹಳ್ಳಿಯವರು ನಮ್ಮ ಭವಿಷ್ಯವು ನಿಜವಾದ ಬಗ್ಗೆ ಸಂತೋಷದ ಪತ್ರಗಳನ್ನು ಬರೆದಿದ್ದರು ಇನ್ನೇನು ತಮ್ಮೂರಿಗೆ ಮಳೆಯಾಗಲಿಲ್ಲ ಎಂಬ ಸಿಟ್ಟಿನಿಂದ ಕೆಲವು ಸ್ವಾರ್ಥಪರರಾದ ಸಭ್ಯಗೃಹಸ್ಥರು ನಮ್ಮ ಮೇಲೆ ಸಿಟ್ಟಿಗೆದ್ದು ನಮ್ಮ ಭವಿಷ್ಯವನ್ನು ದೂಷಿಸಿದ್ದರು ಇಂಥ ಮಂದಮತಿಗಳು ಜಗತ್ತಿನಲ್ಲಿ ಯಾವಾಗಲೂ ಇರತಕ್ಕವರೇ. ಅವರನ್ನು ನಾವು ಲೆಕ್ಕಿಸುವದಿಲ್ಲ ಅತಿ ಸೂಕ್ಷ್ಮ ಗಣಿತ ಮಾಡಿ, ಬಹಳ ಅನುಭವದಿಂದ ಈ ಯಂತ್ರವನ್ನು ಸಿದ್ಧಮಾಡಿದ್ದೇವೆ ಈ ಭವಿಷ್ಯವು ಎಂದಾವರೂ ಎಲ್ಲಿಯಾವರೂ ಸುಳ್ಳಾಯಿತೆಂದು ಯಾರಾದರೂ ಸಿದ್ಧಮಾಡಿದರೆ ನಾವು ತಾತ್ಕಾಲ ಈ ಯಂತ್ರವನ್ನು ತಿರುಗಿ ತಕ್ಕೊಂಡು ಮುವತಿ ಕೊಟ್ಟು ಆ ಪಂಡಿತರ ಹೆಸರನ್ನು ಎಲ್ಲ ಪತ್ರಿಕೆಗಳಲ್ಲಿ ಪ್ರಸಿದ್ಧಿಸಲು ಸಿದ್ಧರಿದ್ದೇವೆ. ಅವರ ಕೀರ್ತಿ ಹಬ್ಬಲಿ; ನಮಗೆ ಹೊಟ್ಟೆಕಿಚ್ಚಿಲ್ಲ ನಮ್ಮ ಯಂತ್ರವನ್ನು ಉಪಯೋಗಿಸುವವರು ಒಂದು ಮಾತನ್ನು ಮಾತ್ರ ನೆನಪಿನಲ್ಲಿಡಬೇಕು ಇದು **ಮಳೆಯಾಗ ಬಹುದಾದ** ಸಂಶಯ ದಿವಸಗಳನ್ನು ಹೇಳುವ ಬುರುಡೆ–ಯಂತ್ರವಲ್ಲ ನಿಶ್ಚಯವಾಗಿ **ಮಳೆಯಾದ** ದಿವಸಗಳನ್ನು ತಪ್ಪದೆ ತೋರಿಸುವ ಸತ್ಯಯಂತ್ರ. ಎಂದೆಂದೂ ಭೂಮಿಯ ಯಾವ ಭಾಗದಲ್ಲಿಯೂ, ಸಾಮಾನ್ಯವೃಷ್ಟಿ ಏನೇ ಆಗಲಿ, ಈ ಯಂತ್ರದಲ್ಲಿ ತಾತ್ಕಾಲ ನೋಡಿರಿ ಒಂದೆರಡು ತಿಥಿಗಳ ಹೆಚ್ಚು ಕಡಿಮೆಯಿಂದ ಆ ತಿಥಿ ಸಿಗಲೇಬೇಕು ಈ ಕಲಿಯುಗದಲ್ಲಿ ಇಷ್ಟು

ಧೈರ್ಯದಿಂದ ಸತ್ಯ ಹೇಳುವವರು ತೀರ ಕಡಿಮೆ! ನಮ್ಮ ಭವಿಷ್ಯವು ಸುಳ್ಳೆಂದು ಅವಿಚಾರದಿಂದ ಹೇಳುವವರಿಗೆ ಬಬಲಾದಿಯ ಜಂಗಮರು ಕೊಡುವ ಎಲ್ಲ ಶಾಪಗಳು ಹತ್ತುವವೆಂದು ಸ್ವಲ್ಪದರಲ್ಲಿ ಎಚ್ಚರಿಕೆ ಕೊಡುತ್ತಿದ್ದೇವೆ.

ಧಾರವಾಡ
ಎಪ್ರಿಲ್ ಫೂಲ್ಸ ಡೇ

ಮಹಾ.... ತ್ರಿಭುವನ ಸುಂದರಶಾಸ್ತ್ರಿ
c/o 'ಜಂತಿ' ಕಚೇರಿ, ಧಾರವಾಡ.
ಹೋಕ್ಸ ನಂ. A 1.



## ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯದ ಮಹಾಯಂತ್ರವು !

| | | | |
|---|---|---|---|
| ಓಂ | ಮಳೆಯ ಯಂತ್ರ | | ಓಂ |
| ಸಾರ್ವಭೌಮ-ನಿರಂತರ-ವರ್ಷಾ-ಭವಿಷ್ಯ | | | |
| ಪ್ರ | ಪ್ರತಿಪದೆ | ಚತುರ್ಥಿ | ಚ |
| | ಸ | | |
| | ಸಪ್ತಮಿ | | |
| ದ | ದಶಮಿ | ತ್ರಯೋದಶಿ | ತ್ರ |
| ಓಂ | ಪರ್ಜನ್ಯರಾಜ ಪ್ರಸನ್ನ | | ಓಂ |

ಬೇಕಾದವರು ಹರಕೊಳ್ಳಬಹುದು.

ವಿ. ಸೂ:— ನಮ್ಮಲ್ಲಿ ಪೂರ್ವಜನ್ಮ, ಪುನರ್ಜನ್ಮ, ಜಾತಕಗಳು, ನಿರಾಶರಾದವರು ಜಪಿಸಬೇಕಾದ ಮಹಾಮಂತ್ರಗಳು, ಕೇವಲ ಧರ್ಮಾರ್ಥವಾಗಿ ಸಿಗುವವು. ಬೇಕಾದರು ೧ ರೂಪಾಯಿ ತಿಕೀಟು ಕಳಿಸಿ ಪತ್ರವ್ಯವಹಾರ ಮಾಡಬೇಕು. ಪತ್ರವ್ಯವಹಾರವು ಗುಪ್ತವಿಡಲಾಗುವದು; ಯಾರೂ ನಾಚಿಕೊಳ್ಳುವ ಕಾರಣವಿಲ್ಲ.

—ಸುಂ. ಶಾ.

# ಹಸ್ತ ಸಾಮುದ್ರಿಕದ ಪ್ರಥಮ ಪಾಠಗಳು

ನಾನು ಆವರಿಗೆ ಒಂದು ಕೈ ತೋರಿಸಿದ್ದೇನೆ, ಇವರಿಗೆ ಒಂದು ಕೈ ತೋರಿಸಿದ್ದೇನೆ ಎಂದು ಜಂಭಕೊಚ್ಚುವ ಜನರು ಬಹಳ. ಆದರೆ ಸಾಮುದ್ರಿಕರಿಗೆ ಕೈ ತೋರಿಸಿದ್ದನ್ನು ಬಹಳ ಜನರು ಬಚ್ಚಿಡುವರು ಅಷ್ಟೇಕೆ, ಕದ್ದು, ಸಂಜೆಯ ಮುಚ್ಚುಗತ್ತಲಲ್ಲಿ, ಅತ್ತಿತ್ತ ನೋಡಿ, ಏನೋ ಲೋಕವಿರುದ್ಧ ಕೆಲಸ ಮಾಡುವವರಂತೆ ಅವರ ಕಡೆಗೆ ಹೋಗುವ ಜನರೂ ಇದ್ದಾರೆ ಏನೂ ಕೆಲಸವಿಲ್ಲದೆ ಕೈನಿಂತ ಜನರು ಮಾತ್ರ. ಊರಿಗೆ ಹೊಸ ಸಾಮುದ್ರಿಕನು ಬಂದಿರುವನೆಂಬ ಸುದ್ದಿ ಬಂದರೂ ಸಾಕು ತೋಳೇರಿಸಿ ಅವನಿಗೆ ಕೈತೋರಿಸುವ ಸಂಭ್ರಮದಲ್ಲಿ ಬೀದಿ ಬೀದಿ ಅಲೆದಾಡುವರು. ಪಾಣಿಗ್ರಹಣದ ಕಾಲಕ್ಕೆ ಯಾವ ಕನ್ನೆಯೂ ವರನೆಂದು ಇದಿರು ನಿಂತವನ ಕೈಯಲ್ಲಿ ಕೈಕೊಟ್ಟು ಆದದ್ದಾಗಲಿ ಎಂದು ಕೊಳ್ಳುವಂತೆ, ದೈವದ ಹಂಗು ತೊರೆದೇ ಎಷ್ಟೋ ಜನರು ಯಾವ ಸಾಮುದ್ರಿಕ-ಬ್ರುವರ ಕೈಯಲ್ಲಿಯೂ ಕೈ ಕೊಡುವರು. ಕೈತೋರಿಸಿ ಅವಲಕ್ಷಣವೆಂಬ ಹೆದರಿಕೆ ಅವರಿಗಿರುವದಿಲ್ಲ. ಲಕ್ಷಣದ ಬಂಡವಲು ತೀರಿದ ಮೇಲೆ ಕೈಗೆ ವಿಧಿ-ನಿಷೇಧ ಉಳಿಯುವದಿಲ್ಲ. ಇಂಥವರ ಹಿಂಗೈಗಳೂ ಅಂಗೈಗಳಂತೆಯೇ ಬಹಳ ಜನರ ಕೈಯಾಡಿ ನುಣುಪಾಗಿರುತ್ತವೆ. ಇದನ್ನು ಸೂಕ್ಷ್ಮ ಸ್ಪರ್ಶದಿಂದ ತಿಳಿದುಕೊಂಡು, ಅಂಥವರಿಗೆ ಏನೂ ಹೇಳಬಹುದು, ಅಥವಾ ಏನೂ ಹೇಳಬಾರದು.

ಸಂಕಟ ಕಾಲದಲ್ಲಿ ತಮಗೆ ಯಾರೂ ಕೇಳದಾಗಲು, ಮುಂದಿಯ ಮೋರೆಯನ್ನಾಗಲಿ, ಮುಗಿಲ ಮೋರೆಯನ್ನಾಗಲಿ ನೋಡುತ್ತ ಕುಳಿತು ಕೊಳ್ಳುವದಕ್ಕಿಂತ, ತಮ್ಮ ಕೈ ನೋಡಿಕೊಳ್ಳುವದೊಳಿತು. ಹೀಗೆ ಮಾಡುವಾಗ್ಗೆ ಯಾರಾದರೂ ನಿಮ್ಮನ್ನು ನೋಡಿ, ನೀವು ಸಾಮುದ್ರಿಕರಿರಬೇಕೆಂಬ ವಿಶ್ವಾಸದಿಂದ ತಮ್ಮ ತೋರಿಸುತ್ತಾರೆ. ಭಾಗ್ಯವು ಒಮ್ಮೊಮ್ಮೆ

ಹೀಗೂ ಕೈಕೊಡುವದುಂಟು [ಒಳ್ಳೆಯ ಅರ್ಥದಲ್ಲಿ]. ಸಾಮುದ್ರಿಕಕ್ಕೆ ಬಹಳ ಬಂಡವಲು ಬೇಕಾಗುವುದಿಲ್ಲ ತೋರಿಸುವವನ ಕೈ, ನೋಡುವವನ ಕಣ್ಣು, ಎರಡಿದ್ದರೆ ಸಾಕು ಎಂದು ನೀವು ತಿಳಿದುಕೊಂಡಿರಬಹುದು. ಹಾಗಲ್ಲ. ಕಣ್ಣಿಲ್ಲದ ಸಾಮುದ್ರಿಕರೂ ಇದ್ದಾರೆ, ಸಾಮುದ್ರಿಕವು ಸ್ಪರ್ಶಜನ್ಯವಾಗಿದೆ. ದೃಷ್ಟಿಜನ್ಯವಲ್ಲ. ತೋರಿಸುವವರಿಗೆ ಇಡಿ ಕೈಗಳಿರದಿದ್ದರೂ ನಡೆದೀತು, ಒಂದೆರಡು ಬೆಟ್ಟು, ಒಂದಿಷ್ಟು ಅಂಗೈ ತುಣುಕು ಇದ್ದರೆ ಸಾಕು. ಇದಕ್ಕೆ ಜ್ಞಾನ ಬೇಡವೇ ? ಸ್ವಲ್ಪಬೇಕು. ಮುಖ್ಯವಾಗಿ ಕೈ ತೋರಿಸುವವರ ಗತಿಗೇಡು, ಅಜ್ಞಾನ, ಭ್ರಮೆ, ಮೋಹ, ಆಶೆ, ಹುಚ್ಚು, ಎಬಡತನ ಇದರಿಂದಲೇ ಸಾಮುದ್ರಿಕರ ಪೋಷಣೆಯಾಗುವದ. ಸಾಮುದ್ರಿಕನಿಗೆ ಕಣ್ಣಿಲ್ಲದಿದ್ದರೂ ಸಾಗೀತು, ಆದರೆ ಒಳ್ಳೆ ಚುರುಕಾದ ನಾಲಿಗೆ ಮಾತ್ರ ಬೇಕು ಮೂಕ ಸಾಮುದ್ರಿಕರನ್ನು ನಾನಿನ್ನೂ ಬದುಕಿನವರನ್ನು ಕಂಡಿಲ್ಲ.

ಸಾಮುದ್ರಿಕವು ರೇಖಾಗಣಿತವಿದ್ದಂತೆ. ಗೆರೆಗಳ ಸಾಮ್ರಾಜ್ಯವೇ ಸಾಮ್ರಾಜ್ಯ. ಅಡ್ಡ-ಉದ್ದ ಗೆರೆಗಳಿಂದ ರೊಕ್ಕ ಕುಣಿಸಾಡಬಹುದು. ಬುದ್ಧಿಯ ಗೆರೆ, ಹೃದಯದ ಗೆರೆ, ಆಯುಷ್ಯದ ಗೆರೆ, ಆರೋಗ್ಯದ ಗೆರೆ, ದೈವದ ಗೆರೆ, ಧನದ ಗೆರೆ ಇವೇ ಮುಖ್ಯ ಗೆರೆಗಳು. ಇನ್ನು ಚಿಕ್ಕಪುಟ್ಟ ಮಕ್ಕಳ ಗೆರೆಗಳು, ಅಡ್ಡತಿಡ್ಡ ಭಾಗ್ಯದ ಗೆರೆಗಳು, ಕತ್ತರಿ, ಶೃಂಖಲೆ. ಯವ, ತಿಲ, ಮಜ್ಜೆ, ಶಂಖ, ಚಕ್ರ, ಡಮರು ಇತ್ಯಾದಿ ಇತ್ಯದಿ ಇವೆ. ಸಮುದ್ರದಲ್ಲಿ ಗುಡ್ಡ ನಡುಗಡ್ಡೆಗಳಿರುವಂತೆ, ಸಾಮುದ್ರಿಕದಲ್ಲಿಯೂ ಗುಡ್ಡನಡುಗಡ್ಡೆಗಳು ಬಂದಿವೆ. ಏಳು ಗ್ರಹಗಳಿಗೆ ಏಳು ಗುಡ್ಡಗಳು. ಐದು ಬೊಟ್ಟುಗಳ ಬುಡದಲ್ಲೈದು, ಆರನೆಯ ಬೊಟ್ಟಿರಬಹುದಾದ ದಿಂಬಿನಲ್ಲೊಂದು; ನಡುಬಟ್ಟೆಯ ಕಟ್ಟಕಡೆಗಳಲ್ಲೊಂದು, ಹೀಗೆ ಗುಡ್ಡಗಳ ಸಾಲಿದೆ. ಗೆರೆಗಳೆಂದರೆ ನದಿಗಳು. ಉಳಿದುದು ನೆಲ. ಅಲ್ಲಿ ಗುಡಿಗುಂಡಾರ, ಪತಾಕೆ ಪಲ್ಲಕ್ಕಿ, ಮೀನ, ಮೊಸಳೆ, ಇರಬಹುದುದು.

ಸಾಮಾನ್ಯವಾಗಿ ಜನ ಕೇಳುವ ಪ್ರಶ್ನೆ ನಾಲ್ಕಾರು ಮಾತ್ರ. ಆಯುಷ್ಯ ಸಂತತಿ, ಧನಲಾಭ, ಬಡತಿ, ಕೆಲಸ, ಸ್ತ್ರೀ ಸುಖ; ಮುದುಕ

ರಿದ್ದರೆ ಯಾತ್ರೆ, ಮರಣ, ಸ್ತ್ರೀಯರಿದ್ದರೆ ಸೌಭಾಗ್ಯ, ಸಂತತಿ; ಜಂಭದ ವರಿದ್ದರೆ ಏನಾದರೂ ದೊಡ್ಡ ಕೆಲಸ ಆಯುಷ್ಯವನ್ನು ಯಾರಿಗೂ ಕಡಿಮೆ ಹೇಳಬಾರದು. ನಾಳೆ ಸಾಯುವೆನೆನ್ನುವವನಿಗೂ ನೂರು ವರುಷ ಆಯುಷ್ಯ ಎಂದು ಹೇಳಬೇಕು ಆದರೆ ಇದನ್ನು ಕಿವಿಯಲ್ಲಿ ಹೇಳಬೇಕು. ಆಯುಷ್ಯವನ್ನು ಕೇಳುವದು ಹೇಳುವದು ಲೋಕದ ಕಿವಿಗೆ ಬಿದ್ದರ ಆಯುಷ್ಯ ಹಾನಿಯಾಗುವದೆಂದು ಹೇಳಬೇಕು. ಹೀಗೆ ಅನಾಹುತವಾದ ಕ್ವಚಿತ್ ಉದಾಹರಣೆಗಳೂ ತಮ್ಮ ಕೇಳಿಕೆಯಲ್ಲಿವೆ ಎಂದು ಅವರಿಗೆ ಬೆದರಿಕೆ ಹಾಕಬೇಕು ಆಯುಷ್ಯಪ್ರಶ್ನೆಯು ಸುಳ್ಳಾ ಗುವ ಪ್ರಸಂಗ ಬರಲಾರದು. ಸತ್ತವರು ಕೇಳಲಾರರು ? ಇದ್ದವರು ಕೇಳುವರೆಂತು ? ಪ್ರಯತ್ನದಿಂದ ಗಳಿಸುವದು ಡ್ಡಿಗಿಂತ ಅಡ್ಡ-ದುಡ್ಡಿನ ಆಸೆಯಿದ್ದವರೆ ಬಹಳ ಜನ ಕೇಳುವವರ ಆಸ, ಮೋಹ, ಎಬಡತನದ ಪ್ರಕಾರ ಎಲ್ಲರಿಗೂ ಧನಲಾಭದ ಒಂದೆರಡು ಮೂರು ಪ್ರಸಂಗಗಳಿವೆಯೆಂದು ಧೈರ್ಯ ಕೊಡಬೇಕು. ಒಂದು ಆಗಿಹೋಯಿ ತೆನ್ನಬೇಕು, ಒಂದೆರಡು ಬರುವವಿವೆಯೆಂದು ಹೇಳಬೇಕು ಆಗಿಲ್ಲ ಎಂದರೆ ಆಗಿದೆ ಎಂದು ಎಟ್ಟತನದ ದಿಟ್ಟತನದಿಂದ ಒತ್ತಿಹೇಳಿ, ನಿಮಗೆ ತಿಳಿದಿಲ್ಲ ಎನ್ನಬೇಕು ಆಮೇಲೆ ಕೇಳಿದ ಜನರು ತಾವೇ ತಾವಾಗಿ 'ಇನ್ನೇನು ಇಂಥ ಒಂದು ಪ್ರಸಂಗ ಬಂದಿತ್ತು, ಏನೂ ಸಿಗಲಿಲ್ಲ' ಎಂದಾಗಲಿ 'ಬಹಳ ಸ್ವಲ್ಪ ಸಿಕ್ಕಿತು" ಎಂದಾಗಲಿ ಹೇಳಿದಕೂಡಲೆ ದೊಡ್ಡಸ್ತಿಕೆಯ ವಿಜಯದ ದೇಶಾವರಿ ನಗೆ ನಕ್ಕು, ಸುತ್ತಲಿನವರ ಕಡೆ ನೋಡಿ— 'ಇದೇ ಆ ಧನಲಾಭವಲ್ಲವೇ ? ಲಕ್ಷ್ಮಿಯೇ ಯಾರ ತೊಡೆ ಯೇರಿ ಕೂಡ್ರಲಾರಳು' ಎಂದು ಚಾರ್ವಾಕ ಮಾತುಗಳನಾಡಬೇಕು. ಸುತ್ತಲಿನವರ ಒಪ್ಪಿಗೆ ಸಹಜವಾಗಿ ಸಿಗುವದು. ಅವರಿಗೆ ತಮ್ಮ ಕೈ ತೋರಿಸಿ ದೈವಪರೀಕ್ಷೆ ಮಾಡಿಕೊಳ್ಳುವ ಆತುರ ಬಹಳ ಇರುತ್ತದೆ. ಸಾಮುದ್ರಿಕನು ಭಟ್ಟಂಗಿಯಂತೆ ಬರಿ ಹೊಗಳುವ ಕಾರಣವಿಲ್ಲ. ಫಲ ಗಳನ್ನು ಯಾವಾಗಲೂ ಸುಖದುಃಖಮಿಶ್ರವಾಗಿ ಹೇಳಬೇಕು ಒಂದೆ ರಡು ಗಂಡಾಂತರಗಳನ್ನು ಸೂಚಿಸಲೂ ಹಿಂಜರಿಯಬಾರದು ಕೇಳು ವವರಿಗೂ ತಮಗೂ ಮತಭೇದ ಬಂದಾಗ "ನಿಮ್ಮ ಕೈಯೇ ಹಾಗಿದೆ"

ಎಂದು ಗದರಿಸಿಯಾಗಲಿ, "ಶಾಸ್ತ್ರದಲ್ಲಿ ಹಾಗೆ ಹೇಳಿದೆ" ಎಂದು ಶಾಸ್ತ್ರವನ್ನು ಅಪರ ಕೋಪಕ್ಕೆ ಗುರಿಮಾಡಿಯಾಗಲಿ, "ನಾನೇನು ದುಡ್ಡಿಗೆ ಹೇಳುವ ಮಾರಿಗೆ-ಜೋಯಿಸನಲ್ಲ" ಎಂದು ಹೆಮ್ಮೆ ಹೇಳಿಕೊಂಡಾಗಲಿ, ಹೊತ್ತು ದೂಡಿ, ಗೆದ್ದವರಂತೆ ನಗಬೇಕು ಕೇಳುವವರು ಗೊಂದಲಗೊಡುವಂತೆ ಮಾಡುವುದು ಸಾಮುದ್ರಿಕನ ಮಾರ್ಗ



# ವಿಮರ್ಶೆಯನ್ನು ಹೇಗೆ ಮಾಡಬೇಕು ?

ವಿಮರ್ಶೆಯನ್ನು ಹೇಗೆ ಮಾಡಬೇಕು ? ಇದೇ ಒಂದು ದೊಡ್ಡ ಸಮಸ್ಯೆ !

ತನ್ನ ಗ್ರಂಥದ ವಿಮರ್ಶೆಯು ಯಾರಿಗೆ ತಾನೆ ಸೇರೀತು ? "ವಿಮರ್ಶೆಗಾಗಿ" ಎಂದು ಬರೆದು ಕಳುಹುವುದು ಕೇವಲ ಶಿಷ್ಟಾಚಾರ ಬರೆಯುವ ವಾಡಿಕೆ ಎಂದು ಬರೆಯುತಕ್ಕುದೇ ಹೊರತು, ಅದು ಹೊಟ್ಟೆಯೊಳಗಿರುವ ಮಾತಲ್ಲ. ಹೊಟ್ಟೆಯೊಳಗೇನೆ ಇರಲಿ, ಹತ್ತು ಜನರು ಮಾಡುವಂತೆ ಮಾಡಬೇಕು, ಆಡುವಂತೆ ಆಡಬೇಕು. ಅದೇ ಶಿಷ್ಟಾಚಾರ. ವಿಮರ್ಶಕರು ಗ್ರಂಥದ ಹೊಟ್ಟೆಯೊಳಗಿನದನ್ನು ತಿಳಿದುಕೊಳ್ಳಬೇಕು. ಇದೇ ರಸಿಕತೆ ಎಂದು ಪ್ರಾಚೀನರು ಹೇಳುತ್ತಾ ಬಂದಿದ್ದಾರೆ. ಎಲ್ಲ ಗ್ರಂಥಕರ್ತರ ಹೊಟ್ಟೆಯೊಳಗಿರುವದೊಂದೆ. ಅದನ್ನು ಹೇಳಲು ನಾಚಿಕೆ, ಹೇಸಿಗೆ ಬರುವದೇಸೋ ನಿಜ. ಆದರೆ ನಿಜವಾದದ್ದನ್ನು ಹೇಳಲು ಎಲ್ಲರಿಗೂ ನಾಚಿಕೆ, ಎಲ್ಲರಿಗೂ ಹೇಸಿಕೆ. ಸುಳ್ಳನ್ನು ನಾಚಿಕೆ ಇಲ್ಲದೆ ಹೇಸಿಕೆ ಇಲ್ಲದೆ ಹೇಳಬಹುದು. ಒಬ್ಬ ಕುವರಿಗೆ ಕೇಳಿರಿ, "ಗಂಡನ ಹೆಸರು ಹೇಳು" ಎಂದು. ಅವಳು ಚಟ್ಟನೆ ಹೇಳುವಳು, 'ಚಂದ್ರಾಮರಾಯ' ಎಂದು; ಯಾಕಂದರೆ ಸುಳ್ಳು ಹೇಳಲು ನಾಚಿಕೆಯಿಲ್ಲ. ಆದರೆ ಅದೇ ಒಬ್ಬ ಮದುವೆಯಾದವಳನ್ನು ಕೇಳಿರಿ 'ಗಂಡನ ಹೆಸರು ಹೇಳು' ಎಂದು. ಅಯ್ಯೊ, ಅದೆಷ್ಟು ಒನಪು, ಅದೆಷ್ಟು ಒಯ್ಯಾರ, ಅದೆಷ್ಟು ನಾಚಿಕೆ ! ಯಾಕಂದರೆ ನಿಜವಾದುದನ್ನು ಹೇಳಲು ಎಲ್ಲರಿಗೂ ನಾಚಿಕೆ. ಇದೇನೋ ನಗೆಮಾತು ಎಂದು ನಾನನ್ನುವದರ ಸತ್ಯತೆಯ ಮನವರಿಕೆಯು ಎಷ್ಟೋ ಜನರಿಗೆ ಆಗದಿದ್ದರೆ ನಾನಿನ್ನೂ ಅನೇಕ ಉದಾಹರಣೆಗಳನ್ನು ಕೊಡಬಹುದು. ಸಂಸಾರವು ಕುವದ ಆಟವೆಂದು ಯಾರಾದರೂ ಒಪ್ಪಿಕೊಳ್ಳುವರೋ?

ಅದಕ್ಕೆ ಪ್ರೇಮಪ್ರಪಂಚವೆಂದು ಶಿಷ್ಟಾಚಾರದ ಹೆಸರು. ಗೃಹಸ್ಥರ ಪೌರುಷವೆಲ್ಲ ಲೋಭದ ಕೊನೆದಾಟವಲ್ಲವೇ ? ಕ್ಷತ್ರಿಯರ ಮಹಿಮೆ ಕ್ರೋಧದ ನೋಗು, ಸ್ವದೇಶಾಭಿಮಾನ ಮತ್ಸರದ ಮಾಟ, ಸಜ್ಜನಿಕೆ ಡಂಭಾಚಾರ ! ಆದರೆ ಇದನ್ನೆಲ್ಲ ಒಪ್ಪಿಕೊಳ್ಳಲು ಹೇಸಿಗೆ, ನಾಚಿಕೆ; ಯಾಕಂದರೆ ಅದು ಸತ್ಯ.

ಆದಕಾರಣ ವಿಮರ್ಶಕಾರರು ‘ ವಿಮರ್ಶೆಗಾಗಿ ’ ಎಂಬ ಅಕ್ಷರಗಳನ್ನು ನೋಡಿದ ಕೂಡಲೇ ‘ ಸ್ವಾಮೀ ! ದಯಮಾಡಿ ನನ್ನ ಪುಸ್ತಕದ ಪ್ರಕಟನೆಯನ್ನು ಮುದ್ರಿಸಬೇಕು. ಅವಶ್ಯವಾಗಿ ಹೊಗಳಬೇಕು. ಈ ಶಿಷ್ಟಾಚಾರದ ಧೈರ್ಯವು ತಮಗಿಲ್ಲದಿದ್ದರೆ ಸುಮ್ಮನಾದರೂ ಇರಬೇಕು ’ ಹೀಗೆಂದೇ ಆ ಸಂಕೇತದ ಅರ್ಥವೆಂದು ತಿಳಿಯಬೇಕು. ‘ ವಿಮರ್ಶೆ ’ಯೆಂದರೆ ಗುಣದೋಷ ವಿಮರ್ಶೆಯೆಂದು ಯೆಂದು ತಿಳಿಯತಕ್ಕುದಲ್ಲ. ಬಾಲಗ್ರಂಥಕಾರರನ್ನು ಪ್ರೋತ್ಸಾಹನಕ್ಕಾಗಿ ಹೊಗಳಬೇಕು ತರುಣ ಗ್ರಂಥಕಾರರು ತಮಗೆ ಇದಿರುತ್ತರ ಕೊಟ್ಟು ಅಪಮಾನ ಮಾಡಬಾರದೆಂದು ಹೊಗಳಬೇಕು. ವೃದ್ಧ ಗ್ರಂಥಕಾರರಿಗೆ ಸಲ್ಲತಕ್ಕ ಮಾನವೆಂದು ಹೊಗಳಬೇಕು. ಬಾಲಗ್ರಂಥಕಾರರು ಬಾಲರೆಂದು ಅಜ್ಞಾನಿಗಳು ಅವರಲ್ಲಿ ದೋಷಗಳಿರುವದು ಸಹಜ, ಅಂತೆಯೇ ಅವುಗಳನ್ನು ಎತ್ತಿ ಆಡುವದು ತಪ್ಪು. ತರುಣ ಗ್ರಂಥಕಾರರು ತರುಣರೆಂದು ಅನನುಭವಿಕರು; ಅವರಲ್ಲಿ ದೋಷಗಳಿರುವದು ಸ್ವಾಭಾವಿಕ; ಆದಕಾರಣ ಅವುಗಳನ್ನು ಎಣಿಸುವದು ಅನವಶ್ಯಕ. ವೃದ್ಧ ಗ್ರಂಥಕಾರರೋ, ಅವರು ವೃದ್ಧರೆಂದೇ ವಿಸ್ಮರಣಶೀಲರು; ಅವರಲ್ಲಿ ದೋಷಗಳಿರುವದು ಯುಕ್ತವೆ, ತಸ್ಮಾತ್ ಅವುಗಳನ್ನು ಹೇಳುವದು ಕೇವಲ ಹುಚ್ಚುತನ. ಒಟ್ಟಿನ ಮೇಲೇನು ? ವಿಮರ್ಶೆಯಲ್ಲಿ ದೋಷಾವಿಷ್ಕರಣಕ್ಕೆ ಸ್ಥಾನವೇ ಇಲ್ಲ.

ಗ್ರಂಥಕರ್ತರಲ್ಲಿ ದೋಷಗಳೇನೋ ತುಂಬಾ ಇರುವೆವು. ಅಧಿಕಾರವೂ ಅಧ್ಯಯನವೂ ಇಲ್ಲದೆ ಬರೆಯಲು ಧೈರ್ಯಮಾಡಿದ್ದೇ

ಮೊದಲನೆಯ ದೋಷ. ದೆವ್ವಸಂಧ ತಪ್ಪುಗಳಿದ್ದೂ ಅವುಗಳೊಡನೆ ಮುದ್ರಾರಾಕ್ಷಸರನ್ನೂ ಬೆರಸಿ ಗ್ರಂಥವನ್ನು ಪ್ರಕಟಿಸಿದ್ದುದು ಎರಡನೆಯ ದೋಷ ಅಭಿಪ್ರಾಯ ಪ್ರಸ್ಥಾಪರ್ಜನಾಪೂರ್ವಕವಾಗಿ ತಮ್ಮ ಗ್ರಂಥಗಳನ್ನು ಮಾರಲು ಹವಣಿಸುವದು ಮೂರನೆಯ ದೋಷ ಕೊಳ್ಳುವವರಿಗೆ ಹಾನಿ, ಮಾರುವವರಿಗಷ್ಟೆ ಲಾಭವಾಗುವಂತೆ ಬೆಲೆ ಯಿಡುವದು ನಾಲ್ಕನೆಯ ದೋಷ ಒಂದೇ ? ಎರಡೇ ? ಮೂರೇ? ನಾಲ್ಕು ಮಹಾದೋಷಗಳಿರುವ ಈ ಗ್ರಂಥರ ಚರುಗಳಿಗೆ "ದೋಷ ಭಾಂಡಾರ' ವೆಂದು ಕರೆದರೆ ಗ್ರಂಥಕರ್ತರ ಮನಸ್ಸು "ದ್ವೇಷ ಭಾಂಡಾರ 'ವಾದೀತೆಂದು ವಿಮರ್ಶಕರು ಆ ಗೊಡವೆಗೆ ಹೋಗ ಬಾರದು. ಹುರುಳಿಲ್ಲದ ವಿಷಯ, ಅರ್ಥವಿಲ್ಲದ ವಾಕ್ಯಗಳು, ರೂಪ ವಿಕಾರಹೊಂದಿದ ಶಬ್ದಗಳು ಇವೇ ಮೊದಲಾದ ಸಣ್ಣಪುಟ್ಟ ದೋಷ ಗಳನ್ನು ತೋರಿಸಲೇಬಾರದು. ಗ್ರಂಥಕಾರರಿಗೊ ತಮ್ಮ ಗ್ರಂಥವು ಚಂದ್ರನಂತೆ ಆದರ್ಶಪ್ರಾಯವಾಗಿ ಹೆಸರುವಾಸಿಯಾಗಬೇಕೆಂದು ಅಪೇಕ್ಷೆ ಜನರೋ ಇವರ ಗ್ರಂಥಗಳ ಕಡೆಗೆ ಬೊಟ್ಟುಮಾಡಿ "ದೋಷಾಕರ ( ಚಂದ್ರ ) " ಎಂದು ಹೆಸರಿಡುವರು ಇನ್ನು ಗುಣ ಗಳ ಬಗ್ಗೆ ಚರ್ಚೆ ಮಾಡಬೇಕೇ ? ಗ್ರಂಥಕರ್ತರೆನ್ನೋ ತಾವೇ ತಪ್ಪಿ ಸಿಕೊಳ್ಳುವರು—" ತಮಗೆ ವ್ಯಾಕರಣ ಗೊತ್ತಿಲ್ಲ, ಛಂದಸ್ಸು ಗೊತ್ತಿಲ್ಲ, ಅಭ್ಯಾಸ ಮಾಡಿದವರಲ್ಲ; ಅನುಭವ ತೀರ ಕಡಿಮೆ "ಎಂದು. ಹೀಗೆ ಅವರು ಕೇವಲ ವಿನಯದಿಂದ ಹೇಳುವರೆಂದಲ್ಲ, ಅವರು ಹೇಳಿ ದ್ದುದು ಯಥಾರ್ಥವೆಂದು ಅವರ ಗ್ರಂಥಗಳನ್ನು ನೋಡಿದ ಬಾಲಕ ನಿಗೂ ತಿಳಿಯುವದು.

ಕೆಲವು ಗ್ರಂಥಕರ್ತರು ತಾವು ಮುನ್ನುಡಿಯಲ್ಲಿ ಬರೆದು ಕೊಳ್ಳುವ ಮಾತುಗಳನ್ನು ಗ್ರಂಥಬರೆಯಲು ಪ್ರಾರಂಭಿಸುವ ಪೂರ್ವ ದಲ್ಲಿಯೇ ಬರೆದು ಹತ್ತು ಸಲ ಮತ್ತೆ ಮತ್ತೆ ಅವನ್ನೇ ಓದಿಕೊಂಡಿದ್ದರೆ ಮುಂದಿನ ಗ್ರಂಥವನ್ನೆ ಅವರು ಬರೆಯುತ್ತಿರಲಿಲ್ಲ. ಮುನ್ನುಡಿಯನ್ನು ಹಿಂದುಗಡೆ ಬರೆಯುವ ಗುಟ್ಟೇ ಅದು. " ಕೆಲವು ಗ್ರಂಥಕರ್ತರು

ತಮ್ಮ ಮುನ್ನುಡಿಯಲ್ಲಿ ತಮ್ಮನ್ನೇ ಹೊಗಳಿಕೊಳ್ಳುವದು ತಾನೆ. ಆ ಸ್ವವಿಷಯಾನಭಿಜ್ಞರಾದ ಪಂಡಿತರ ವಿಮರ್ಶೆ ಮಾತಬಹುದಷ್ಟೆ-" ಸರಿ. ಬೆಕ್ಕಿನ ಕಣ್ಣು ಮುಚ್ಚಿದ್ದರೂ ಅವಕ್ಕೆ ತಾನು ಕದ್ದು ಹಣ್ಣೆ ತಿನ್ನುತ್ತಿರುವದು ಗೊತ್ತಿರುವದಿಲ್ಲವೇ ? ಬೆಕ್ಕು ಕಣ್ಣು ಮುಚ್ಚಿದ್ದುದು ಬಡಿಗೆ ಕಾಣಬಾರದೆಂದು ಬಡಿಗೆಯ ಬೆದರು ಕಂಡು ಕಣ್ತೆರೆದ ಹಕ್ಕಿ ಹಾರಿಹೋಗಬಹುದು; ಕಣ್ಣುಮುಚ್ಚಿಕೊಂಡ ಬೆಕ್ಕು ಯೋಗ ಬಹುದೇ ? ಅಂತೂ ದೋಷಗಳಿವೆ ಎಂದು ತಿಳಿದವರಿಗೆ ಅವನ್ನು ಹೇಳುವದು ಬೇಡ ತಿಳಿದೂ ತಿಳಿಯದಂತಿನ್ನವರಿಗೆ ಹೇಳುವದು ಹೇಗೆ?

ಅಥವಾ ಇಷ್ಟೆಲ್ಲಾ ಏಕೆ ? ವಿಮರ್ಶಾಪತ್ರಗಳನ್ನು ಇಷ್ಟು ಹಿಡಿದು ಕಾಡುವದೇತಕ್ಕೆ ? ಗ್ರಂಥವು ಒಂದು ಬಟ್ಟೆ, ಗ್ರಂಥಕರ್ತೃವು ಎರಡನೆಯ ಬಟ್ಟೆ, ವಿಮರ್ಶಕರದು ಮೂರಾಬಟ್ಟೆ ವಾರ್ತಾಪತ್ರಿಕೆ ವರ್ತಮಾನಪತ್ರಿಕೆಗಳೊಳಗಿನ ವಿಮರ್ಶೆಗಳನ್ನು ನೋಡಿದರೆ— ಕವಿಗಳಿಗಿಂತ ವಿಮರ್ಶಕರೇ ಸಿರಂಕುಶರೇನೋ ಎಂದೆನಿಸುವದು ವಿಮರ್ಶೆಗೆ ಬಂದ ಪುಸ್ತಕದ ಹೆಸರನ್ನು ಕೇಳಿದ ಕೂಡಾಗಲಿ, ಆ ಪುಸ್ತಕವನ್ನು ಬಿಚ್ಚಿ ನೋಡಿದ ಕೂಡಾಗಲಿ, ನಾಲಿಗೆಯ ಮೊಕ್ಕಿನೊಡಲಿಗೂ ಲೇಖಣಿಯ ತುಟ್ಟತುದಿಗೂ ತಾನಾಗಿಯೇ ಹರಿದು ಬರುವ ಮಾತಿನ ಸಾಲೆಯೇ ವಿಮರ್ಶೆ ಎಂದು ಅವರ ಅಭಿಪ್ರಾಯ ಈ ವಿಮರ್ಶಾ ವ್ಯಾಖ್ಯೆಯು ವರ್ತಮಾನಪತ್ರಗಳ ಕಾವ್ಯಾನುಪ್ರೇಕ್ಷೆಗಿಂತಲೂ ಮಿಗಿಲಾಗಿಲ್ಲವೇ ? ವಿಮರ್ಶಕರ ದೃಷ್ಟಿಯಲ್ಲಿ ಗ್ರಂಥವಿಷಯಕ್ಕಿಂತ ಅದರ ಕವರು, ಪುಟಸಂಖ್ಯೆ, ಗ್ರಂಥದಬೆಲೆ, ವಿಳಾಸ, ಹೆಚ್ಚಾದರೆ ಪ್ರಸ್ತಾವನೆ ಗ್ರಂಥದ ಹೆಸರು ಇವು ಬಹಳ ಮಹತ್ವವುಳ್ಳವುಗಳು. ಗ್ರಂಥದ ವಿಷಯವೇನು ? ಅತ್ತಲಿಂದಿತ್ತ ಕಲೆಹಾಕಿದ ಸರಕು ಗ್ರಂಥಕರ್ತನ ಸ್ವತಂತ್ರ ಬುದ್ಧಿಯು ಪುಟಸಂಖ್ಯಾನಿಶ್ಚಯ, ಗ್ರಂಥನಾಮಕರಣ, ಮೂಲ್ಯನಿರ್ಣಯ, ಮೊದಲಾದವುಗಳಲ್ಲಿಯೇ ಕಂಡು ಬರುವದು.

ಅದೂ ಇರಲಿ. ವಿಮರ್ಶಾಶಾಸ್ತ್ರಕ್ಕಾದರೂ ಎಲ್ಲೆ ಕಟ್ಟುಗಳಿ

ವೆಯೋ ? ಏನೂ ಇಲ್ಲ. ಅದು ತೀರ ಸ್ವಚ್ಛಂದ, ಸ್ವೈರ. ತಲೆಗೊಂದು ರೀತಿ. ಒಮ್ಮೆರಸಕ್ಕೆ ಮಹತ್ವವಾದರೆ, ಒಮ್ಮೆ ಸರಸಕ್ಕೆ. ಒಮ್ಮೆ ರೀತಿಗೆ ಶ್ರೇಷ್ಠತೆಯಾದರೆ ಒಮ್ಮೆ ನೀತಿಗೆ. ಒಮ್ಮೆ ಅಲಂಕಾರಕ್ಕೆ ಪ್ರಾಶಸ್ತ್ಯವಾದರೆ, ಒಮ್ಮೆ ಶುದ್ಧ ಒರಟುತನಕ್ಕೆ ಹೀಗೆ ಸ್ವಭಾವದಿಂದಲೇ ವಕ್ರವಕ್ರವಾಗಿರುವ ಶಾಸ್ತ್ರದಲ್ಲಿ ' ಇದು ನಮಗೆ ಸೇರುವದಿಲ್ಲ ' ಎಂಬ ಹೊಸದೊಂದು ವಕ್ರಸ್ವಭಾವದ ರೀತಿ ಬೇರೆ ಸೇರಿಕೊಂಡಮೇಲೆ ಕೇಳುವದೇನು ?

ತರುಣ ವಿಮರ್ಶಕನೇ ! ಅಧೀರನಾಗಬೇಡ. ಈ ಲೇಖವ ನೋದಿ ನಿನಗೇನಾದರೂ ಹೊಸ ಬೆಳಕು ಕಂಡೀತೆಂದು ಅಶಿಸಿದ್ದೆ. ಇನ್ನೂ ಕಾಣಲೊಲ್ಲದಲ್ಲಾ ಎನ್ನುವೆ " ವಿಮರ್ಶೆ ಹೇಗೆ ಮಾಡಬೇಕು ? " ಎಂದು ನೀನು ಒತ್ತಿ ಕೇಳುವೆ. ನಾನೂ ಮತ್ತೆ ಕೇಳುತ್ತೇನೆ " ಹೀಗಾದ ಮೇಲೆ ವಿಮರ್ಶೆ ಹೇಗೆ ಮಾಡಬೇಕು ? " ಎಂದು.



# ನಗೆಹಾಡು

 

೧ ಕಸಪೊರಕೆ

೨ ಮುದುಕಿ

೩ ಶೂನ್ಯ

## ಅಣಕವಾಡು

೪ ಬೆಕ್ಕು ಹಾರುತಿದೆ ನೋಡಿದಿರಾ ?

೫ ಒರದಾ ! ತಗಣೀ ಒರದಾ !

೬ ಒಂದು 'ಓಡು'

# ಕಸಪೊರಕೆ

೧

ಕಸಪೊರಕೆ ! ಕಸಪೊರಕೆ !
ಧ್ವಜವೆತ್ತಿ ಮೇಲಕ್ಕೆ
ಹೊರಟಿಹುದು ಈ ಜಗದ ಶುದ್ಧಿಕರಣಕ್ಕೆ;
ಇದು ಅಹಿಂಸಾ ಯುದ್ಧ !
ಶುಭ್ರಸಿದ್ಧವ ಗೆದ್ದ ,
ಇಲ್ಲದವ ತುತ್ತಾದ ಮನದ ಮರಣಕ್ಕೆ

೨

ಕಡಲನುಡುಗುವವಕ್ಕೆ
ಒಬ್ಬ ಯಾವುದೊ ಮುದುಕೆ
ಹಿಡಿದ ಕಸಪೊರಕೆಯಿದು ಇದರ ದಾಯಾದಿ !
ಅಂತರಿಕ್ಷವನುಡುಗು-
ತಿರುವ ಬೆಳಕಿನ ಪಿಡುಗು—
ಧೂಮಕೇತು ಅನಾದಿ, ಇದರದೇ ಹಾದಿ !

೩

ಮನೆಯೊಳಿದೆ ಇಲ್ಲಣವು
ಮೊಗದೊಳಿದೆ ತಲ್ಲಣವು
ಹಸನಾಗಿ ಗುಡಿಸಲಿಕೆ ಬೇಕು ಕಸಪೊರಕೆ ,
ಏಳು ತಲೆಮಾರಿನಲಿ
ಬಂದ ಕಸ ಹಾರುವಲಿ
ಗಾಳಿಯೊಲು ಬೀಸಿದರೆ ಕಸಪೊರಕೆ—ಹರಕೆ

# ಮುದುಕಿ

ನಾದಸಂರಕ್ಷಣೆಗೆ ತೋಫು ಇರದಿರಲು
ನಾಡಿಗೊಂದಿರಬೇಕು ಬಯ್ಯುವಾ ಮುದುಕಿ,
ಊರ ಸಂರಕ್ಷಣೆಗೆ ನಾಯಿ ಇರದಿರಲು
ಊರಿಗೊಂದಿರಬೇಕು ಬಾಯ್ಬಡಕ ಮುದುಕಿ ,
ಕೇರಿಯನ್ನೆಚ್ಚರಿಸೆ ಗಂಟೆಯಿರದಿರಲು
ಕೇರಿಗೊಂದಿರಬೇಕು ಕೆಮ್ಮುವಾ ಮುದುಕಿ,
ಮನೆ ಮನೆಗೆ—ಪ್ಲೇಗಾಗಿ—ದೀಪವಿರದಿರಲು
ಮನೆಗೊಂದು ಇರಬೇಕು ಸಾಯುದಾ ಮುದುಕಿ !



ಸಂಪಾದಕ ಮಹಾಶಯ,

ಶೂನ್ಯ ಸಂಪಾದನೆಯ ಮಾರ್ಗದ (Mystic) ಕವಿತೆಯೊಂದನ್ನು ಕಳಿಸಿದ್ದೇನೆ. ಅವಶ್ಯವಾಗಿ ಹಾಕಬೇಕು. ಪ್ರತಿಫಲವೇನಾದರೂ ದೊರಕೀತೇ?

— ಅನುಭಾವಿ.

## ಶೂನ್ಯ

( ಧಾಟಿ : 'ಕತಿಕತಿ ಕಬ್ಬಿಣಾ, ಕಾಕಾದೇವಿ' ಎಂಬಂತೆ. )

ದುಂಡು ಮೇಜಿನ ಸುತ್ತ
ದುಂಡು ದುಂಡು ಮಂದಿ,
ದುಂಡು ದುಂಡು ಮಂದಿಗೆ
ಬಂಡೀಗಾಲೀ ಹೊಟ್ಟೆ,
ಬಂಡೀಗಾಲೀ ಹೊಟ್ಟೆಗೆ
ಗುಂಡುಕಲ್ಲ ತಲೆಯು,
ಗುಂಡುಕಲ್ಲs ತಲೆಗೆ
ಸೊನ್ನೆ ಸುತ್ತಿದ ಮಿದುಳು,
ಸೊನ್ನೆ ಸುತ್ತಿದ ಮಿದುಳಿಗೆ
ಪೂಜಿ ಪೂಜಿ ಫಲವು,
ಪೂಜಿ ಪೂಜಿ ಫಲದೊಳಗೆ
ಚಕ್ರಗೋಷ್ಠಿ ಗೊರಟ,
ಚಕ್ರಗೋಷ್ಠಿ ಗೊರಟಕ್ಕೆ
ವಕ್ರ ಶನೀ ನೋಟ,
ಬೆಳ್ಳನ್ನವರಿಗಾಟ—
ಕಪ್ಪನ್ನವರಿಗೆ ಕಾಟ—
ತಂತಮ್ಮನೆಗೋಟ—
ಮುದುಕನದಿದು ಬ್ಯಾಟ.

ಸಂಪಾದಕರ ಉತ್ತರ:— ನೀವು ಕವಿತೆಯನ್ನು ಗಂಭೀರವಾಗಿ ಬರೆದಿದ್ದರೂ ನಾವು ಚೇಷ್ಟೆಗಾಗಿ ಹಾಸ್ಯದಲ್ಲಿ ಹಾಕಿದ್ದೇವೆ. ತಪ್ಪು ತಿಳಿದುಕೊಳ್ಳಬಾರದು. ಇನ್ನು, ಶೂನ್ಯ ಸಂಪಾದನೆಯ ಮಾರ್ಗದ ಕವಿತೆಗೆ ದ್ರವ್ಯ ಸಂಪಾದನೆ ಏನಾಗಬೇಕು ? ನೀವೇ ಹೇಳಿರಿ.

# ಅಣಕವಾಡಗಳು

ಪೆರಡಿ ( Parody ) ಎಂದರೆ ಅಣಗಿಸುವ ಹಾಡು—ಅಣಕವಾಡು, ಎಂದು ಒಂದು ಆಂಗ್ಲ ಸಾಹಿತ್ಯದಲ್ಲಿ ಕವಿತಾಪ್ರಕಾರವುಂಟು. ಉತ್ಪನ್ನವಾದ ಭಾವ ವಿಚಾರಗಳ ವಿಪರ್ಯಾಸವನ್ನು ಮಾಡಿ ಹಾಸ್ಯವನ್ನುಂಟುಮಾಡುವದು ಆದರಪೊಂದು ರೀತಿ ಆದಕಾರಣ, ಎಷ್ಟೋ ಸಲ ಜನರಿಗೆ ಅತಿಪರಿಚಯವುಳ್ಳ, ಆದರಕ್ಕೆ ಪಾತ್ರವಾದ ಕವಿತೆಗಳೇ ಅಣಕವಾಡಿಗೆ ಗುರಿಯಾಗುವವು, ಬಲಿಬೀಳುವವು. ಇಂಗ್ಲೀಷದಲ್ಲಿಯ Gray's Elegy ಹಾಗೂ Omer Khayyam ಇವುಗಳಮೇಲಿನ ಅಣಕವಾಡುಗಳು ಹೆಸರು ಹೊಂದಿವೆ. 'ಅತಿಪರಿಚಯಾದವಜ್ಞಾ' ಎಂಬುದು ಈ ವಿಷಯದಲ್ಲಿ ನಿಜ ಆಂಗ್ಲ ಸಾಹಿತ್ಯದಲ್ಲಿರುವಂತೆ ಅಣಕವಾಡೇನೂ ನಮ್ಮಲ್ಲಿ ಬಹುಜನ-ಸಮ್ಮತ-ಪ್ರಕಾರವಾಗಿಲ್ಲ ಆದರೆ ಈ ಕವಿತಾ ಪ್ರಕಾರವು ಕನ್ನಡಿಗರಿಗೇನೂ ತೀರ ಹೊಸದಲ್ಲ. ಸಂಸ್ಕೃತ ವಾಯುಸ್ತುತಿಯ ಕನ್ನಡ ಅಣಕವಾಡುಗಳ ತುಣುಕುಗಳಾದ 'ತಾ ಬಿದ್ದಾ ತಮ್ಮಪ್ಪ ಬಿದ್ದಾ ನೆರೆಮನಿ ತಿಮ್ಮಪ್ಪ ಬಿದ್ದಾ .. ..' ಎಂಟೆತ್ತಂ ಬಾರಕೋಲಂ ಕುಳಮಿಣಿ ಸಹಿತಂ ಮೇತಿ ತತ್ರಾಣಿಯುಕ್ತಂ" ಇತ್ಯಾದಿ ಶ್ಲೋಕಗಳು ಎಷ್ಟೋ ಜನರ ಬಾಯಲ್ಲಿ ನೆಲೆಸಿವೆ. ಹಾಗೂ ಅನುಷ್ಟುಪ್ ವೃತ್ತವನ್ನು ಅಣಕಿಸುವ "ಗೋಡೆ ಛತ್ತೋ ಧಡಾ ಧಡಾ, ಅಪ್ಪ ಹೊಡೆದನೋ ಫಡಾಫಡಾ | ಬಳಿ ಹೆಚ್ಚಿದವ್ರೋ ಪಳಾಪಳಾ, ಅವ್ವ ಅತ್ತಳೋ ಗಳಾ ಗಳಾ" ಮೊದಲಾದ ಶ್ಲೋಕಗಳು ಅದೇ ಅಮರಕೊಶವನ್ನು ಕಲಿಯುವ ಕಿಡಿಗೇಡಿ ಬಾಲಕರ ಬಾಯಲ್ಲಿ ಅಲ್ಲಲ್ಲಿ ಕೇಳಬರುವವು. ( ಇತ್ತೀಚೆಯ ಕಾಕದೂತ, ಚಹಾಗೀತ ಎಂಬವುಗಳಾದರೂ Parodyಯ ಕಲ್ಪನೆಯಿಂದ ಹುಟ್ಟಿದವುಗಳೇ ಸರಿ. ) ಅನುಕರಣವು ಮೂಲಕ್ಕೆ ಹೆಚ್ಚು ಹೆಚ್ಚು ಸಮೀಪಿಸಿದಂತೆ ಅಣಕವಾಡಿನಿಂದಾಗುವ ಆನಂದವೂ ಹೆಚ್ಚಾಗುತ್ತದೆ. ಒಂದನೆಯ ಪದ್ಯದಲ್ಲಿ ಬೆಕ್ಕಿನ ಒಂದು ರಾತ್ರಿಯ ಪರಾಕ್ರಮವು ವರ್ಣಿತವಾಗಿದೆ. ಎರಡನೆಯದರಲ್ಲಿ ಒಬ್ಬ ಬಡ ಅಡಿಗೆಯವನು ಇಡೀ ದಿನವೆಲ್ಲ ಅಡಿಗೆ ಮಾಡಿ ಒಂದು ಮನೆಯಲ್ಲಿ ಮಲಗಲು ಹೊರಟಾಗ ತಗಣೀ ಕಾಟದಿಂದ ಬಳಲಿ ಬಳಲಿ ಅಪರೊಳಗಿಂದ ಪಾರುಮಾಡೆಂದು 'ದೇವರಿಗೊರೆದ ಕತೆಯು ಚಿತ್ರಿತವಾಗಿದೆ.

# ಹಕ್ಕಿ ಹಾರುತಿದ ನೋಡಿದಿರಾ ?

[ ಈ ಮೂಲ ಪದ್ಯ ನನ್ನದೆ ]

ಇರುಳಿರುಳಳಿದು ದಿನ ದಿನ ಬೆಳಗೆ
ಸುತ್ತುಮುತ್ತಲೂ ಮೇಲಕೆ ಕೆಳಗೆ
ಗಾವುದ ಗಾವುದ ಗಾವುದ ಮುಂದೆ
ಎವೆ ತೆರೆದಿಕ್ಕುವ ಹೊತ್ತಿನ ಒಳಗೆ
ಹಕ್ಕಿ ಹಾರುತಿದೆ ನೋಡಿದಿರಾ ?

ಕರಿನರೆ ಬಣ್ಣದ ಪುಚ್ಚಗಳುಂಟು
ಬಿಳಿ–ಹೊಳೆ ಬಣ್ಣದ ಗರಿ-ಗರಿಯುಂಟು
ಕೆನ್ನನ ಹೊನ್ನನ ಬಣ್ಣ-ಬಣ್ಣಗಳ
ರೆಕ್ಕೆಗಳೆರಡೂ ಪಕ್ಕದಲುಂಟು
ಹಕ್ಕಿ ಹಾರುತಿದೆ ನೋಡಿದಿರಾ ?

ನೀಲಮೇಘ ಮಂಡಲ-ಸಮ ಬಣ್ಣ !
ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ !
ಚಿಕ್ಕೆಯ ಮಾಲೆಯ ಸಿಕ್ಕಿಸಿಕೊಂಡು
ಸೂರ್ಯ-ಚಂದ್ರರನು ಮಾಡಿದೆ ಕಣ್ಣಾ
ಹಕ್ಕಿ ಹಾರುತಿದೆ ನೋಡಿದಿರಾ ?

ರಾಜ್ಯದ ಸಾಮ್ರಾಜ್ಯದ ತೆನೆ ಒಕ್ಕಿ
ಮಂಡಲ-ಗಿಂಡಲಗಳ ಗಡ ಮುಕ್ಕಿ
ತೇಲಿಸಿ ಮುಳುಗಿಸಿ ಖಂಡ-ಖಂಡಗಳ
ಸಾರ್ವಭೌಮರಾ ನೆತ್ತಿಯ ಕುಕ್ಕಿ
ಹಕ್ಕಿ ಹಾರುತಿದೆ ನೋಡಿದಿರಾ ?

# ಬೆಕ್ಕು ಹಾರುತಿದೆ ನೋಡಿದಿರಾ ?

ಹಕ್ಕಿ ಹಾರಿತು, ಎಂದು ಬೆಕ್ಕು ಹಾರಿತು,
ಹಕ್ಕಿ ಹಾರುತ್ತಲೆ ಇತ್ತು, ಬೆಕ್ಕು ಕೆಳಗೆ ಬಿತ್ತು.

— ಗಾದೆ.

ಈರುಳ್ಳ್ಯ ರುಳಲು ಮಾಡವು ಬೆಳಗೆ
ಅತ್ತಲಿತ್ತಲೂ ಕತ್ತಲಿಯೊಳಗೆ
ಯಾವುದ ! ಯಾವುದ ! ಯಾವುದ ಎಂದು
ಕೇಳುವ ಹೇಳುವ ಹೊತ್ತಿನ ಒಳಗೆ
ಬೆಕ್ಕು ಹಾರುತಿದೆ ನೋಡಿದಿರಾ ?

ಕರಿ-ನರೆ ಬಣ್ಣದ ಸೊನಡೆಯು ಗಂಟು
ಬಿಳಿ-ಹೊಳೆ ಬಣ್ಣದ ಮೀಸೆಗಳೆಂಟು
ಹಚ್ಚನ ಬೆಚ್ಚನ ಪಚ್ಚೆಯ ವೈರಿನ
ಬಣ್ಣದ ಕಣ್ಣು ಕಿವಿ ಬದಿಗುಂಟು
ಬೆಕ್ಕು ಹಾರುತಿದೆ ನೋಡಿದಿರಾ ?

ಕಾಡಿಗೆಗಿಂತಲೂ ಕಪ್ಪೋ ಬಣ್ಣ
ಕತ್ತಲಕೇ ಕಾಲೊಡೆದಪ್ಪೊ ಅಣ್ಣಾ
ಕೂದಲ ಕೂದಲ ನಿಮಿರಿಸಿಕೊಂಡು
ಸೂರ್ಯ-ಚಂದ್ರರೊಲು ಮಾಡಿವೆ ಕಣ್ಣು
ಬೆಕ್ಕು ಹಾರುತಿದೆ ನೋಡಿದಿರಾ ?

ರಾಜ್ಯದ ಪಗ್ಗಣಗಳ ತಾನೊಕ್ಕಿ
ಜೊಂಡಿಂಗದ ಹುಲುಗಡಣವ ಮುಕ್ಕಿ
ಹಾರಿಸಿ ಹೇಂಟೆಯ ಹಿಂಡು ಹಿಂಡುಗಳ
ಜಂಭದ ಕೋಳಿಯ ನೆತ್ತಿಯ ಕುಕ್ಕಿ
ಬೆಕ್ಕು ಹಾರುತಿದೆ ನೋಡಿದಿರಾ ? •

ಯುಗ-ಯುಗಗಳ ಹಣೆ-ಬರಹವ ಒರಸಿ
ಮನ್ವಂತರಗಳ ಭಾಗ್ಯವ ತೆರೆಸಿ
ರೆಕ್ಕೆಯ ಬೀಸುತ ಚೇತನೆಗೊಳಿಸಿ
ಹೊಸಗಾಲದ ಹಸುಮಕ್ಕಳ ಹರಸಿ
ಹಕ್ಕಿಹಾರುತಿದೆ ನೋಡಿದಿರಾ ?

ಬೆಳ್ಳಿಯ ಹಳ್ಳಿಯ ಮೇರೆಯ ಮೀರಿ
ತಿಂಗಳಿನೂರಿನ ನೀರನು ಹೀರಿ
ಆಡಲು ಹಾಡಲು ತಾ ಹಾರಾಡಲು
ಮಂಗಳ ಲೋಕದ ಅಂಗಳಕೇರಿ
ಹಕ್ಕಿ ಹಾರುತಿದೆ ನೋಡಿದಿರಾ ?

ಮುಟ್ಟಿದೆ ದಿಙ್ಮಂಡಲಗಳ ಅಂಚ
ಆಚೆಗೆ ಚಾಚಿದೆ ತನ್ನಯ ಚುಂಚ
ಬ್ರಹ್ಮಾಂಡಗಳನು ಒಡೆಯಲು ಎಂದೋ
ಬಲ್ಲರು ಯಾರಾ ಹಾಕಿದ ಹೊಂಚ !
ಹಕ್ಕಿ ಹಾರುತಿದೆ ನೋಡಿದಿರಾ ?



ಹಾಲಿನ ಗಡಿಗೆಯ ತಳವನು ಒರಸಿ
ಮೊಸರಿನ ಮಡಿಕೆಯ ಮುಚ್ಚಳ ತೆರೆಸಿ
ಉರುಳಿಸಿ ಹೊರಳಿಸಿ ಭಾಂಡ ಭಾಂಡಗಳ
ಬಿಸಿ ಹಾಲಲಿ ತುಸು ಮಜ್ಜಿಗೆ ಬೆರಸಿ
ಬೆಕ್ಕು ಹಾರುತಿದೆ ನೋಡಿದಿರಾ ?

ಇಲಿಗಳು ಜೆಳ್ಳಗೆ ಇದ್ದರು ಬಿಡದು
ಬೆಳ್ಳಗಿದ್ದುದನು ಕುಡಿದೂ ಕುಡಿದೂ
ಬೆಳುದಿಂಗಳ ಹಾಲೆನೆ ತಿಳುಕೊಂಡೊ
ಮುಗಿಲಿನಂಗಳಕೆ ಸಿಟ್ಟನೆ ಸಿಡಿದು
ಬೆಕ್ಕು ಹಾರುತಿದೆ ನೋಡಿದಿರಾ ?

ಹಿಂದಕೆ ಮುಂದಕೆ ಚಾಚಿದೆ ಕಾಲ
ಉಬ್ಬಿಸೆಬ್ಬಿದೆ ಜೊಂಡಿನ ಬಾಲ
ನೋಡಿ ಚಂದ್ರನನು ಬೆಣ್ಣೆಯೆಂದೆಂದೊ
ಬಲ್ಲರು ಯಾರಿವರಪ್ಪನ ಸಾಲ !
ಬೆಕ್ಕು ಹಾರುತಿದೆ ನೋಡಿದಿರಾ ?



# ವರದಾ ! ಕಂಚಿವರದಾ !

[ ಗೋಪಾಲದಾಸರ ಕೀರ್ತನೆ ]

( ರಾಗ: ಅಸಾವೇರಿ, ಆಟತಾಳ )

ವರದಾ ನೀ ಪೊರೆಯೆಂದು
ಕರೆಯಲಾಕ್ಷಣ ಬಂದು | ನೆರೆವೆ
ಬಂದು | ನೆರೆವೆ
ಅಭೀಷ್ಟವಗರೆವೆ || ಪಲ್ಲ ||
ನಿರುತ ನಿನ್ನಯ ಚರಣಶರಣರ
ಪೊರೆವ ಕಾರ್ಯಧುರಂಧರ ||
ವರದಾ ! ಕಂಚೀವರದಾ ! || ಅಪ ||

೧

ಮಡುವಿನೋಳ್ ಮಕರಿ ಕಾಲ್
ಪಿಡಿದು ಸೆಳಯಲು ಜೀವ | ಸರಿಯೆ
ಜೀವ | ಸರಿಯೆ
ತುತಿಸಿ ನಿನ್ನ ಕರಿಯೆ ||
ಮಡದಿಯೊಡ ನುಡಿಯದಲೆ ಸಂಗಡ
ಎಡಬಲದವರ ಕಡೆಗೆ ನೋಡದೆ
ತಡೆಯದಲೆ ನೀ ಒದಗಿ ಕರಿಯು
ತೊಡರು ಬಿಡಿಸಿದೆ ಕಡು ದಯಾನಿಧೇ !
ವರದಾ ! ಕಂಚೀವರದಾ !

# ಒರದಾ ! ತಗಣಿ ಒರದಾ

( ಅಣಕವಾಡು )

[ರಾಗ: ಅಸಾವೇರಿ ಆಟತಾಳ]

ಒರಲಿ ತಾ ಹರಿಯೆಂದು
ಒರಗಿದಾಕ್ಷಣ ಬಂದು । ನೆರೆಯೆ
ಬಂದು । ನೆರೆಯೆ
ಮಗ್ಗಲದೆಲಬ ಕೊರೆಯೆ ॥ಪ॥

ನಿರುತ ತನ್ನಯ ಕರಚರಣಗಳ
ಕೊರೆದು ಕಾಡುವ ಕಾಟತಾಳದೆ
ಒರದಾ ! ತಗಣಿ ಒರದಾ ॥ಅಪ॥

೧

ಮಡಲಿನೊಳ್ ತಗಣಿ ಕಾಲ್
ಪಿಡಿದು ಕಡಿಯುಲು ಜೀವ । ಸರಿಯೇ
ಜೀವ । ಸರಿಯೇ
ಉಗುರಿಲಿ ಕಾಲ ಕೆರಿಯೆ ॥

ಮಡದಿಯೊಡ ನುಡಿಯುದಲೆ ಮಲಗಿದ
ಎಡಬಲದವರ ಕಡೆಗೆ ನೋಡದೆ
ತಡೆಯುದಲೆ ತಾ ಬಾಗಿ ಕರಿಯ
ತೊಡೆಯ ಸಂದಿಯ ತಗಣಿ ತೆಗೆದು
ಒರದಾ । ಒಂದು ಒರದಾ !

೨

ತೊಡೆಯಿಂದ ನಡೆಯೆಂದು
ನುಡಿದು ಕೆಡಹೆ ಧ್ರುವ | ಮಿಡುಕೆ
ಧ್ರುವ | ಮಿಡುಕೆ
ಕಂಡನು ನಿನ್ನ ಹುಡುಕೆ ||
ಪೊಡವಿಯಡಿ ಉಂಗುಟದಲೊತ್ತುತ
ದೃಢದಿ ಜಪವನು ಜಡಿದು ಮಾಡಲು
ತಡೆಯದಲೆ ನೀನೊಲಿದು ಶೀಘ್ರದಿ
ಕೊಡದ ಸಂಪದವ ಒಡನೆ ನೀಡಿದೆ !
ವರದಾ ! ಕಂಚೀವರದಾ !

೩

ಕಡುಬಾಧೆ ಬಡಿಸಿ ನಿ-
ನ್ನೊಡೆಯನೆಲ್ಲಿಹನೆಂದು | ನುಡಿಯೆ
ಎಂದು | ನುಡಿಯೆ
ಕಂಬ ತೋರಿ ಬಡಿಯೆ ||
ಸಿಡಿಲಿನಂದದಿ ಘುಡಿಘುಡಿಸಿ ಕೆಂ-
ಗಿಡಿಯನುಗುಳುತ ಕೆಡಹಿ ಅಸುರನ
ಪಡೆದ ವರವನು ಒಡನೆ ಭಂಗಿಸಿ
ದೃಢಭಕುತನಿಂಗೆಡಹನುಳುಹಿದಿ !
ವರದಾ ! ಕಂಚೀವರದಾ !

೪

ಮುಡಿ ಪಿಡಿದೆಳೆತಂದು
ನಡುಸಭೆಯೊಳಗುಟ್ಟ | ಉಡಿಗೆ
ಉಟ್ಟ | ಉಡಿಗೆ
ಸೆಳೆಯೆ ಬಾಲೆ ನಡುಗೆ

೨

ತೊಡೆಗೊಂದು ಅಡಿ ಗೊಂದು
ಕಡಿಯೆ ಕಾಟಕೆ ಬಡವ | ಮಿಡುಕಿ
ಬಡವ | ಮಿಡುಕಿ
ದಣಿದನು ಅವನು ಹುಡುಕಿ
ಪೊಡವಿಯಡಿ ಬೆಂಬದಿಯಲೊತ್ತುತ
ದೃಢದಿ ತಗಣಿಯು ಜಪವ ಮಾಡಲು
ತಡೆಯದಲೆ ತಾನೊಲಿದೊ ಶೀಘ್ರದಿ
ಕೊಡದೆ ಬಿಡದೇ ಕೈಗೆ ಸಿಕ್ಕಲು
ಒರದಾ | ಅದನೂ ಒರದಾ !

೩

ಕಡುಬಾಧೆ ಬಡಿಸೆ ಇದ–
ರೆಡೆಯು ಎಲ್ಲಿಹದೆಂದು | ನುಡಿದು
ಎಂದು | ನುಡಿದು
ಕಂಬವ ಕಂಡು ಬಡಿದು ||
ಸಿಡಿಲಿನಂದದಿ ಘುಡುಘುಡಿಸಿ ಕೆಂ-
ಗಿಡಿಯನುಗುಳುತ ಹಲ್ಲುಕಡಿಯುತ
ಕೆಡವಿ ಕೆಡವಿದ ಹಾಗೆ ತಗಣಿಯ
ಸಡಗರದ ಸಂಸಾರವೆಲ್ಲಾ
ಒರದಾ | ಎಲ್ಲಾ ಒರದಾ !

೪

ಉಡಿಪಿಡಿದೆಳೆತಂದು
ನಡುಮನೆಯೊಳಗುಟ್ಟ | ಉಡಿಗೆ
ಉಟ್ಟ | ಉಡಿಗೆ
ಸೆಳೆಯೆ ಮೈಯು ನಡುಗೆ ||

ಒಡೆಯರ್ಕೈವರು ದೃಢ ತಿಳಿದು ನಿ-
ನ್ನಡಿಗಳಿಗೆ ಮೊರೆ ಇಡುವ ಪಾರ್ಥನ
ಮಡದಿಗಕ್ಷಯ ಉಡುಗೆ ಉಡಿಸಿದೆ
ಬಡವ ಬಲ್ಲಿದರೊಡೆಯ ಮಾನದ !
ವರದಾ ! ಕಂಚೀವರದಾ !

೫

ಬಡತನದಲಿ ಬನ್ನ
ಬಡುತಲಿರಲು ವಿಪ್ರ—| ಮಡದಿ
ವಿಪ್ರ—| ಮಡದಿ
ನುಡಿಯ ಕೇಳಿ ದೃಢದಿ
ಮಡದಿ ರುಕ್ಮಿಣಿಯೊಡೆಯ ಪಾರ್ವನ
ಅಡಿಗಡಿಗೆ ಪೊಡಮಡುತ ತಂದೊ-
ಪ್ಪಿಡಿಯ ಅವಲಿಯ ಕೊಡಲು ಭುಂಜಿಸಿ
ಕೆಡದ ಸಂಪದ ಒಡನೆ ನೀಡಿದಿ !
ವರದಾ ! ಕಂಚೀವರದಾ !

೬

ಅಜಮಿಳ ವನದೊಳಂ-
ತ್ಯಜೆ ವಿವಸ್ತ್ರಳ ಕಂಡಂಗಜನ
ಕಂಡಂ। ಗಜನ
ಬಾಣಕೆ ಸಿಲುಕಿ ಸ್ವಜದ ||
ಯಜನ ಭಜನೆಯ ತ್ಯಜಿಸಿ ಕುಪ್ರಜ
ಸೃಜಿಸಿ ರಜನಿಗೆ ಕಜರು ಬರೆ ಭಾ-
ನುಜನ ಪ್ರಜೆಗಳಿಗಂಜಿ ನಿಜ ಆ-
ತ್ಮಜನ ಭಜಿಸಲು ದ್ವಿಜನ ಸಲುಹಿದಿ !
ವರದಾ ! ಕಂಚೀವರದಾ !

ಮುಡಿಯು ಮೇಲ್ಗಡೆ ನಡದ ತೆಳಗಡೆ
ಅಡಿಯು ಕೆಳಗಡೆ ತೊಡೆಯು ಒಳಗಡೆ
ಕಡಿದು ಕಾಡುವ ತಗಣಿ ಬಳಗವ
ಬಡಕ ಬಲಿತಿದು ಎಂದು ನೋಡದೆ
ಒರದಾ ! ಸಾಲಕೆ ಒರದಾ !

೫

ಬಡತನದಲಿ ಬನ್ನ
ಬಡುತಲಿರಲು ನನಗೆ | ಕಡಿದಿ
ನನಗ | ಕಡಿದಿ
ಇರುವ ನೆತ್ತರ ಕುಡಿದಿ||
ಮುಡದಿ ಮಕ್ಕಳಿಗಾಗಿ ಪಾರ್ವನು
ಅಡಿಗಡಿಗೆ ಮಾಡುತ್ತ ಸೊರಗಿ
ಕಡೆಗೆ ಸಾವಿನ ಕಡೆಗೆ ಹೊರಟರೆ
ಕಡಿವ ಕಾಳ್ ರಕ್ಕಸರೆ ಎಂದು
ಒರದಾ ! ತಿರುಗಿ ಒರದಾ !

೬

ಸ್ವಜನರೆನ್ನದೆ ವಿವ-
ಸ್ತ್ರಜನಕ್ಕೆ ಹೆದನಾದ | ರದನಾ
ಹಾದ | ರದನಾ
ಚಾಚುವಿ ನಿನ್ನ ವದನಾ ||
ಯುಜನ ಭಜನೆಯ ತ್ಯಜಿಸಿ ಕುಪ್ರಜೆ
ಸೃಜಿಸಿ ರಜನಿಯುನಾಳಿ ಬಲು ಭಾ-
ಳಜನ ಪ್ರಜರಿಗೆ ಕಾಡಲೆಂದಾ-
ತ್ಮಜರ ಪುಟ್ಟಿಸುತಿರುವಿ ಎಂದು
ಒರದಾ ! ಸಿಕ್ಕದ್ದೊರದಾ !

ಈ ಪರಿಂದಲಿ ನಿನ-
ಗಾಪನ್ನ ಜನರ ನೀ| ಪೊರೆದೆ
ನೀ ಪೊರೆದೆ
ಸುಕೀರ್ತಿಯ ಮೆರೆದೆ ||

ಪಾಪಿ ನಾ ಬಲು ಎನ್ನ ಅವಗುಣ
ರಾಪು ಮಾಡದೆ ಅಖಿಳ ಜಗತೀ
ವ್ಯಾಪ ಗುರುಗೋಪಾಲ ವಿರಲ ಗು–
ಣಾಪಯೋಧಿ ಸ್ವರೂಪಗೋಪಿತ !
ವರದಾ ! ಕಂಚೀವರದಾ !



೬

ಈ ಪರಿಯಲಿ ತನ-
ಗಾಪತ್ತಿ ಬಂದಿರೆ | ಒರದಾ
ತಾನು | ಒರದಾ
ರಕ್ತದ ಚಿತ್ರ ಬರೆದಾ ||
ಪಾಪಿ ನಾ ಬಲು ಎನ್ನ ಅವಗುಣ
ರಾಪು ಮಾಡದೆ ಅಖಿಳ ಜಗತೀ
ವ್ಯಾಪಮುತ್ಕುಣ ಕುಲವನೆಲ್ಲವ
ಶಾಪದಿಂ ಸಂಹಾರ ಮಾಡೆಂ-
ದೊರೆದಾ ! ದೇವರಿಗೊರೆದಾ !



# ಒಂದು ' ಓದು '

ಉದಿತೋದಿತ ರವಿ ಕೆಂಪು—
ಸಿರಿಸುಗ್ಗಿಯ ಕರ ಕೆಂಪು—
ವರರತ್ನವು ಕಡುಗೆಂಪು—
—ಕೆಂಡ ಎಂದಿತು ತಾನೆ ಕೆಂಪು
—" ಆಗಲಾಗಲಿ " ಎಂದರು.
ಹಿಮನಗಕಣಗಣ ತಂಪು—
ಮಾಗಿಯು ಮುದ್ದಿಡೆ ತಂಪು—
ತಿಂಗಳ ಬಿಸಿಲೂ ತಂಪು—
—ನೀರು ಎಂದಿತು ತಾನೆ ತಂಪು
—" ಹಾಗೆ ಆಗಲಿ " ಎಂದರು.
ವನವನ ಪವನವು ಕಂಪು—
ಕಸ್ತೂರಿಯು ಬಲು ಕಂಪು—
ಅಲರಲರೂ ನರುಗಂಪು—
—ಮಣ್ಣು ಎಂದಿತು ತಾನೆ ಕಂಪು
—'ಹಾಗೂ ಆಗಲಿ' ಎಂದರು.
ಕಂಪಿನ " ಸಿಂಫನಿ " ಮೂಡಿರಲಾಗಿ
ತಂಪೂ " ಕಂಪನಿ " ಹೂಡಿರಲಾಗಿ
ಕೆಂಪಿನ " ಗುಂಪೂ " ಕೂಡಿರಲಾಗಿ
ಭೇದವದೇತಕೆ ? ಖೇದವದೇತಕೆ ?
" ಬಸ್ಸಿ " ನಲಿ
" ಸೆನ್ಸಸ್ಸಿ " ನಲಿ

" ಶಾಂತಿಃ ಶಾಂತಿಃ " ಛಂದಕ್ಕೋ ಮುರಿದೀ '**ಶಾಂತಿಃ**' ಮುಂದಕ್ಕೆ.